# ಉಪವಾಸ ತ್ರಯ ಸುಳಾದಿ




ಶ್ರೀ ವಾದಿರಾಜರು

ಸಂ– ಡಾ| ಎಚ್. ಜಿ. ಲೋಕೂರ



ಶ್ರೀ ವಾದಿರಾಜ ಪ್ರಕಾಶನ ಮಾಲಾ. ಪೂರ್ಣಪ್ರಜ್ಞ ವಿದ್ಯಾಪೀಠ,

ಬೆಂಗಳೂರು–೫೬೦೦೨೮

# ಅವತಾರ ತ್ರಯ ಸುಳ್ಳಾದಿ

## ಶ್ರೀ ವಾದಿರಾಜರು

ಸಂಪಾದಕರು - ಡಾ। ಎಚ್ ಜಿ ಲೋಕೂರ, ಬೆಳಗಾವಿ

ಶ್ರೀ ವಾದಿರಾಜ ಪ್ರಕಾಶನ ಮಾಲಾ—೮,
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು-೫೬೦೦೨೮.

AVATARATRAYA SUVVALI — a poetical biography of Hanuma, Bheema and Madhwa, Composed by Shree Vadiraja (1480-1600), & edited with introduction-notes by Dr. H. G. Lokur.

ಪುಟ : ೧೨+೫೮

ಬೆಲೆ : ೫-೦೦

ಪ್ರತಿಗಳು : ೧೦೦೦



ತಾ. ೧೩-೧-೧೯೯೩
(ಆಂಗಿರಸ-ಪುಷ್ಯ, ಸಂಕ್ರಮಣ ಭೋಗಿ)

ಅಷ್ಟಮ ಪುಷ್ಪ,
ಶ್ರೀ ವಾದಿರಾಜ ಪ್ರಕಾಶನ ಮಾಲಾ,
ಪೂರ್ಣಪ್ರಜ್ಞ ವಿದ್ಯಾಪೀಠ,
ಬೆಂಗಳೂರು-೫೬೦೦೨೮.

Vijaylaxmi Art Printers, Belgaum-590002.

# ಪರಿವಿಡಿ

# ಪ್ರಕಾಶಕರ ಮಾತು

ಭಾವಿ ಸಮೀರ ಶ್ರೀ ವಾದಿರಾಜ ಸಾರ್ವಭೌಮರು ವ್ಯಾಸ-ದಾಸ ಸಾಹಿತ್ಯಕ್ಕೆ ವಿಶೇಷ ಕೊಡುಗೆ ಇತ್ತಿದ್ದಾರೆ ಸಂಸ್ಕೃತ-ಕನ್ನಡ ಭಾಷೆಯಲ್ಲಿ ತಮ್ಮ ಅಗಾಧ ಪಾಂಡಿತ್ಯದಿಂದ ತಾತ್ವಿಕ ವಿಚಾರಗಳನ್ನು ಸೊಗಸಾಗಿ ನಿರೂಪಿಸಿದ್ದಾರೆ 'ಅವತಾರ ತ್ರಯ ಸುವ್ವಾಲಿ'ಯಲ್ಲಿ ವಾಯುದೇವರ ಅವತಾರ ತ್ರಯವನ್ನು ತುಂಬಾ ಸುಂದರವಾಗಿ ವರ್ಣಿಸಿ ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ ಕನ್ನಡದಲ್ಲಿ ಕೆಲ ಗ್ರಂಥ ಬರೆದಿರುವ ಹಾಗೂ ವಾದಿರಾಜರ ಕನ್ನಡ ಕೃತಿಗಳನ್ನು ಸಂಶೋಧಿಸಿರುವ ಡಾ। ಎಚ್ ಜಿ ಲೋಕೂರವರು ಈ ಕೃತಿಯನ್ನು ಪುನಃ ಸಂಪಾದಿಸಿದ್ದು ತುಂಬಾ ಸಂತೋಷದ ವಿಷಯ ಇದು ನಮ್ಮ ಪ್ರಕಾಶನ ಮಾಲೆಯ ಎಂಟನೆಯ ಪ್ರಕಟನೆಯಾಗಿರುತ್ತದೆ ಇದಕ್ಕೆ ಆರ್ಥಿಕ ನೆರವಿತ್ತ ಮಾತೋಶ್ರೀ ಕೃಷ್ಣಾ ಬಾಯಿ ಲೋಕೂರ ಅವರಿಗೆ, ಈ ಪುಸ್ತಕವನ್ನು ಸಂಪಾದಿಸಿ ಕೊಟ್ಟ ಡಾ। ಲೋಕೂರವರಿಗೆ, ಮುನ್ನುಡಿ ನೀಡಿದ ಪ್ರಾ। ಭಾಗೋಜಿಯವರಿಗೆ, ಇದನ್ನು ಸುಂದರವಾಗಿ ಮುದ್ರಿಸಿದ ಬೆಳಗಾವಿಯ ವಿಜಯಲಕ್ಷ್ಮಿ ಆರ್ಟ ಮುದ್ರಣದ ಶ್ರೀ ಮೋಹನ ಕುಲಕರ್ಣಿ ಹಾಗೂ ಸಿಬ್ಬಂದಿಯವರಿಗೆ ಹಾರ್ದಿಕ ವಂದನೆಗಳು

**ಗೋಪಾಡಿ ರಾಘವೇಂದ್ರ ಭಟ್ಟ,**
ಶ್ರೀ ವಾದಿರಾಜ ಪ್ರಕಾಶನ ಮಾಲಾ,
ಪೂರ್ಣಪ್ರಜ್ಞ ವಿದ್ಯಾಪೀಠ,
ಬೆಂಗಳೂರು-೫೬೦೦೨೮

# ಮುನ್ನುಡಿ

ನನಗೆ ಆತ್ಮೀಯರಾದ ಡಾ। ಹಯವದನ ಲೋಕೂರರು ವಾದಿ-ರಾಜರ ಕನ್ನಡ ಕೃತಿಗಳನ್ನು ಕುರಿತು ಮಹಾಪ್ರಬಂಧ ರಚಿಸಿ ವಿದ್ವಾಂಸರ ಮನ್ನಣೆಗೆ ಪಾತ್ರರಾದವರು ಈಗಾಗಲೇ ಡಾ। ಲೋಕೂರರು ಸಂಪಾದನೆ ಮಾಡಿದ ವಾದಿರಾಜತೀರ್ಥರ ಶ್ರೀಕೃಷ್ಣ ಬಾಲಲೀಲೆಯು ಹುಬ್ಬ-ಳ್ಳಿಯ ಮಿಂಚಿನಬಳ್ಳಿ ಪ್ರಕಾಶನದಿಂದ ಮೂಡಿ ಬಂದಿದೆ.

ಈಗ ವಾದಿರಾಜರ 'ಅವತಾರ ತ್ರಯ ಸುವ್ವಾಲಿ'ಯನ್ನು ಸಂಪಾದಿಸಿ ಹೊರತರುತ್ತಿದ್ದಾರೆ

ಸಂಶೋಧಕ ವರ್ಗವು ಏಕ ಆಕರದ ಕೃತಿಗಳನ್ನು ಅಧಿಕೃತವೆಂದು ಒಪ್ಪುವದಿಲ್ಲ ಆದರೆ ಇದ್ದ ಒಂದು ಆಕರವೂ ಗೆದ್ದಲು ಹುಳುಗಳ ಪಾಲಾಗಬಾರದೆಂದು, ಅಂಥವನ್ನೂ ಸಂಶೋಧನೆ ಸಂಪಾದನೆಗಳಿಗೇ ಮೀಸಲಾದ ಸಂಸ್ಥೆಗಳು ಪ್ರಕಟಿಸಿವೆ 'ಅವತಾರ ತ್ರಯ ಸುವ್ವಾಲಿ'ಯ ಬೇರೆ ಬೇರೆ ಪ್ರತಿಗಳು–ಕೆಲವು ಈಗಾಗಲೇ ಮುದ್ರಣಗೊಂಡವು–ಇರುವ-ದರಿಂದ ಇಲ್ಲಿ ಅಧಿಕೃತತೆಗೆ ಸಂದೇಹ ಪಡಬೇಕಾಗಿಲ್ಲ ಡಾ ಲೋಕೂರರು ಲಭ್ಯವಿರುವ ಪ್ರತಿಗಳನ್ನೆಲ್ಲ ಗಮನಿಸಿ ಈ ಕೃತಿಯ ಮೂಲಸ್ವರೂಪಕ್ಕೆ ತೀರ ಹತ್ತಿರವಾಗುವಂತೆ ಸಮರ್ಥ ಸಂಪಾದನೆ ಮಾಡಿದ್ದಾರೆ.

ಕೆಲವು ಸಂಶೋಧಕರಿಗೆ ( ಬಾಲಲೀಲೆಯಲ್ಲಿ ) ಕಂಡ 'ತಾರತಮ್ಯ ತಪ್ಪಿದ ನಮನ' ಮತ್ತು 'ರಾಯ ರಾಮ-ಚಂದ್ರ'ರ ಉಲ್ಲೇಖ'ಗಳು, ಅನಿ-ಯತ ಪ್ರಾಸ, ಗೇಯ ದೇಸಿ ಶೈಲಿಗಳಿಂದ ಈ ಕೃತಿ ವಾದಿರಾಜರದಾಗಿರದೆ ಬೇರೆ ಯಾವಳೋ ಹೆಣ್ಣುಮಗಳು ರಚಿಸಿರಬಹುದೆಂಬ ಸಂಶಯ ವ್ಯಕ್ತ ಮಾಡಿದುದನ್ನು 'ಪ್ರಸ್ತಾವನೆ'ಯಲ್ಲಿ ಲೋಕೂರರು ಪ್ರತಿಭಟಿಸಿದ್ದಾರೆ 'ಶ್ರೀ–ಸ್ತ್ರೀ ಸಾಮಾನ್ಯರಿಗೆಂದೇ' ರಚಿಸಿರುವದರಿಂದ ದೇಸಿ ಶೈಲಿ–ಅನಿ

ಯಂತ ಪ್ರಾಸಗಳು ಸಮರ್ಥನೀಯವೆನಿಸಿವೆ. ತಾರತಮ್ಯ ವಿಚಾರದಲ್ಲೂ 'ಕೆಟ್ಟ ಪಾಠ ಸರಿಪಡಿಸಲಾಗಿದೆ' ಎಂದಿದ್ದಾರೆ; ಇದಕ್ಕೂ ಸಮಂಜಸ ಕಾರಣ ಒದಗಿಸಿದ್ದಾರೆ. 'ರಾಯ ರಾಮಚಂದ್ರ'ರು ಉತ್ತರಾದಿ ಮಠದ ಶ್ರೀರಾಮ ಚಂದ್ರತೀರ್ಥರೆಂದು ಬೆಳಕು ಚೆಲ್ಲಿದ್ದಾರೆ.

ಕೃತಿಯ ಕೊನೆಯಲ್ಲಿ ಕೊಟ್ಟಿರುವ ಟಿಪ್ಪಣಿಗಳು ಸಂಪಾದಕರ ಸೂಕ್ಷ್ಮ ಅವಲೋಕನ, ದ್ವೈತಸಿದ್ಧಾಂತದ ಪರಿಜ್ಞಾನ, ಪಾಠ-ನಿರ್ಣಯದಲ್ಲಿ ಖಚಿತತೆಯನ್ನು ಸೂಚಿಸುತ್ತವೆ.

ವಾದಿರಾಜರು ದಶಾವತಾರದ ಬಗ್ಗೆ ಪ್ರೀತಿ-ಭಕ್ತಿ ತುಂಬಿಕೊಂಡಿರು ವಂತೆ, ಹನುಮ-ಭೀಮ-ಮಧ್ವ ಈ ಅವತಾರತ್ರಯದಲ್ಲೂ ಅದೇ ಪ್ರೀತಿ ಭಕ್ತಿಗಳನ್ನು ವ್ಯೈಗೂಡಿಸಿಕೊಂಡುದನ್ನು ಎತ್ತಿ ತೋರಿ, ಈ ಕೃತಿಯ ಅಭ್ಯಾಸಕ್ಕೆ ಅನುಕೂಲ ಹಿನ್ನೆಲೆ ರೂಪಿಸಿದ್ದಾರೆ.

ಈ ಕೃತಿಯಲ್ಲಿ 'ಇರುವ ತಪ್ಪು ತಿಳಿಸಿದಲ್ಲಿ ತಿದ್ದಲೆಡೆಯುಂಟು' ಎಂಬ ಮಾತು ಸಂಪಾದಕರು ತಿದ್ದುಪಡೆಗೂ ಸಿದ್ಧ ಎಂದು ಸೂಚಿಸಿದೆ! ಸಂಪಾದಕರು ಪ್ರಸ್ತಾವನೆಗೆ ಬಳಸಿರುವ ಭಾಷೆಯಲ್ಲಿ ನಯ ಮೂಡಿದರೆ ವಿದ್ವಾಂಸರನ್ನು ಸಹೃದಯಭಾವದಿಂದ ವಿವೇಚನೆಗೆ ಅಣಿಗೊಳಿಸಬಹು ದೆಂದು ಕಾಣುತ್ತದೆ.

ಇದು ವಿದ್ವಾಂಸರ ವಿದ್ವತ್ತೆಗೆ ಆಹಾರ ಒದಗಿಸುವದರ ಜೊತೆಗೆ 'ಶ್ರೀ-ಸ್ತ್ರೀ ಸಾಮಾನ್ಯರಿಗೆ' ಶುದ್ಧ ಪಾಠವನ್ನು ಒದಗಿಸಲು ಸಮರ್ಥವಾ ಗಿದೆ. ಇಂಥದೊಂದು ಕೃತಿಯನ್ನು ಸಂಪಾದಿಸಿರುವ ಡಾ। ಲೋಕೂರರು ತಮ್ಮ ಅಭ್ಯಾಸದ ಫಲವನ್ನು ಜನತೆಗೆ ಹೆಚ್ಚು ಹೆಚ್ಚಾಗಿ ಕೊಡುವರೆಂದು ಆಶಿಸುತ್ತೇನೆ.

ಚೇತನ,
ಭಾಗ್ಯನಗರ, ೭ನೆಯ ಬೀದಿ.
ಬೆಳಗಾವಿ-೫೯೦೦೦೬.

ಪ್ರಹ್ಲಾದಕುಮಾರ ಭಾಗೋಜಿ
೧೦-೧೦-೯೨,
(ಅಂಗಿರಸ, ಆಶ್ವಿನ ಹುಣ್ಣಿಮೆ).

# ಪ್ರಸ್ತಾವನೆ

ಕ್ರಿ ಶ ೧೪೮೦-೧೬೦೦ರ ಅವಧಿಯಲ್ಲಿದ್ದ ವಾದಿರಾಜರ ಪೂರ್ವಾ-ಶ್ರಮದ ನಾಮ ಭೂವರಾಹ. ಅವತರಿಸಿದ್ದು ಕುಂದಾಪುರದೆಡೆಯ ಹೂವಿನಕೆರೆಯ ರಾಮಾಚಾರ್ಯ-ಸರಸ್ವತೀ ಸುತರಾಗಿ, ಉಡುಪಿಯ ವಿಷ್ಣು ತೀರ್ಥಮಠದ ವಾಗೀಶತೀರ್ಥಾನುಗ್ರಹದಿಂದ. ನಂತರ ಅದೇ ಪೀಠವೇರಿ, ಸೋದೆಯಲ್ಲಿ ಮಠ ಕಟ್ಟಿಸಿ ವೃಂದಾವನಸ್ಥರಾದರು

ಉಡುಪಿಯ ಪರ್ಯಾಯ ಪುನರ್ರೂಪಿಸಿ, ಮಧ್ವರಂತೆ ಎರಡು ಭಾರತ ಯಾತ್ರೆಗೈದು, 'ರುಕ್ಮಿಣೀಶ ವಿಜಯ–ಯುಕ್ತಿಮಲ್ಲಿಕಾ–ಲಕ್ಷಾಲಂಕಾರ–ತೀರ್ಥಪ್ರಬಂಧ–ದಶಾವತಾರ ಸ್ತೋತ್ರಾ'ದಿ ಸಂಸ್ಕೃತ ಹಾಗೂ 'ವೈಕುಂಠ ವರ್ಣನೆ–ಗುಂಡಕ್ರಿಯೆ–ಸ್ವಪ್ನಪದ– ಹರಿಸರ್ವೋತ್ತಮಸಾರ–ಭ್ರಮರಗೀತೆ ಶ್ರೀಕೃಷ್ಣ ಬಾಲಲೀಲೆ-ಅವತಾರತ್ರಯ ಸುವ್ವಾಲಿ–ನೂರಾರು ಕೀರ್ತನೆ ತಾತ್ಪರ್ಯ ನಿರ್ಣಯಾ'ದಿ ಕನ್ನಡ ಕೃತಿ ಅನುಗ್ರಹಿಸಿದ ಮಹಿಮರವರು

ಆದರೆ ಅವರ ಋಜುತ್ವದಂತೆ, ಕೆಲವು (ಕನ್ನಡ) ಕೃತಿಗಳ ಅಸ್ತಿತ್ವ-ಕರ್ತೃತ್ವ ಕೆಲ ವಿದ್ವಾಂಸರಿಗೆ ವಿವಾದ್ಯವೆನಿಸಿವೆ. ಅದರಿಂದ ಇವುಗಳನ್ನು ಈಚೆ ರಚಿಸಿದ ಯಾರೋ ವಾದಿರಾಜರ ಹೆಸರು-ಅಂಕಿತ ಹಾಕಿರುವರೆಂದು ಅಭಿಪ್ರಾಯಿಸಿದ್ದಾರೆ ಬೆಂಗಳೂರಿನಿಂದ ಪ್ರಕಟವಾದ 'ಶ್ರೀಕೃಷ್ಣ ಬಾಲ ಲೀಲೆ'ಯ ಮುನ್ನುಡಿಗಳಲ್ಲಿ ಪೇಜಾವರ ಶ್ರೀಗಳೂ ಪ್ರೊ- ಪಾಂಡುರಂಗಿ ಯವರೂ, ಹುಬ್ಬಳ್ಳಿಯ ಆವೃತ್ತಿಗೆ ಸವಿನುಡಿಯಿತ್ತ ಡಾ। ವರದರಾಜ ರಾಯರೂ, ಮೈಸೂರು ವಿ ವಿ ದ 'ವಾದಿರಾಜರ ದೀರ್ಘಕೃತಿಗಳ' ಪೀಠಿ ಯಲ್ಲಿ ಡಾ। ನಾಗರತ್ನರೂ, 'ಸಂಯುಕ್ತ ಕರ್ನಾಟಕ' ೨೦-೩-೯೨ರ ಲೇಖ ನದಲ್ಲಿ ಡಾ। ಶ್ರೀನಿವಾಸ ಹಾವನೂರರೂ 'ಬಾಲಲೀಲೆ'ಯ ಬಗ್ಗೆ, ಹಾಗೂ ಕೊನೆಯ ಇಬ್ಬರು ಕ್ರಮಶಃ 'ಸುವ್ವಾಲಿ-ನಿರ್ಣಯ ಟೀಕೆ'ಗಳ ಬಗೆಗೆ ಈ ಅಭಿಪ್ರಾಯ ಸೂಚಿಸಿದ್ದಾರೆ ಇದಕ್ಕೆ ಮುಖ್ಯ ಕಾರಣ, ಇವುಗಳ ಏಕಾ-ಕರದ ಪ್ರತಿಗಳಲ್ಲಿ ಕಂಡ ತಾರತಮ್ಯ ತಪ್ಪಿದ ನಮನ-ರಾಯ ರಾಮ-

ಚಂದ್ರರ ಉಲ್ಲೇಖ–ಗೇಯ ದೇಸೀಶೈಲಿ-ಪ್ರಾಸದ ಅನಿಯತತೆ ಮೊದಲಾ
ದುವು ಆದರೆ ವಾದಿರಾಜರ ಕನ್ನಡ ಕೃತಿಗಳ ಅಧ್ಯಯನ–ಸಂಶೋಧನೆ
ಗಳಲ್ಲಿ ನನಗೆ ಉಪಲಬ್ಧವಾದ ಭಿನ್ನ ಆಕರಗಳಿಂದ ಇವುಗಳ ಅಸ್ತಿತ್ವ-
ಕರ್ತೃತ್ವಗಳೆರಡೂ ನಿಶ್ಶಂಕವೆನಿಸಿವೆ

ಧಾರವಾಡ ಜಿಲ್ಲಾ ಶಿರಹಟ್ಟಿ ತಾಲೂಕು ಬಾಳೆಹೊಸೂರಿನ ದಿ| ಹನುಮಂತ ಗುರುರಾವ ಕುಬೇರ ಮನೆತನದ 'ಬಾಲಲೀಲೆ-ಸುವ್ವಾಲಿ'ಗಳ ಹಸ್ತಪ್ರತಿ ನೂರಾರು ಅಧಿಕ ನುಡಿ ಹೊಂದಿದ್ದು, ಕೆಲವೆಡೆ ಕ್ರಮ–ಪಾಠ ಭೇದಗಳಿವೆ. ಈ ಕ್ರಮ ಗಮನಿಸಿದಲ್ಲಿ ತಾರತಮ್ಯದ ನಮೂನ ಗೋಚರಿಸುವುದು. 'ರಾಯ ರಾಮಚಂದ್ರರೆ'ಂದರೆ ಉತ್ತರಾದಿ ಮಠದ ರಾಮಚಂದ್ರತೀರ್ಥರೆಂಬಂಶ ವಿದ್ವಾಂಸರಿಗೆ ಹೊಳೆದಿಲ್ಲ ವಾದಿರಾಜರ ಕೀರ್ತನೆ ಸಾಂಗತ್ಯಗಳ ಹಾಡಿನ ಧಾಟಿ ಹಾಗೂ 'ಕೀಚಕ ವಧೆ'ಯ ಸರಳತೆ ಇಲ್ಲಿದ್ದು, 'ಪ್ರಾಸ ಐಚ್ಛಿಕವೇ ಹೊರತು ನಿಯತವಲ್ಲ'. ಇವು ಶ್ರೀ-ಸ್ತ್ರೀ ಸಾಮಾನ್ಯರಿಗೆಂದೇ ರಚಿತವಾಗಿ, ಭಾಷೆ ಬಂಧ ಬಿಗುವಾಗದೆ ಸಂಪ್ರದಾಯದ ಹಾಡುಗಳತ್ತ ವಾಲಿವೆ ಇಂಥ ಸಂಪ್ರದಾಯದ ಉಕ್ತಿ ಸರ್ವಸಾಮಾನ್ಯವಾಗಿ, ಯಾರೋ ಹೆಣ್ಣುಮಗಳು ರಚಿಸಿ ಅಧಿಕೃತತೆಗೆ ಅಂಕಿತ ಪಲ್ಲಟಿಸಿಕೊಂಡುವೆಂದು, 'ಸಾಯುಜ್ಯ ಪದವಿ ಕೊಡುವ ಶ್ರೀನಿವಾಸನು' ಎಂದ ಮಾತ್ರಕ್ಕೆ 'ಶ್ರೀನಿವಾಸಾ'ಂಕಿತ ಕವಯಿತ್ರಿಗಾರೋಪಿಸುವುದು ಉಚಿತವೆನಿಸದು. 'ಬಾಲಲೀಲೆ'ಯ ಪೂರ್ವಾರ್ಧಾಂತ್ಯ ಮಂಗಳನುಡಿ ಮತ್ತೆ ಸೇರಿದಂತೆನಿಸಿದರೂ ಸಮುಚಿತವಾಗಿ ವಾದಿರಾಜರವೇ, ಆದರೆ ಇತರತ್ರವೂ ಇರುವ 'ವಾದಿರಾಜ ಮಾಡಿದ' ಎಂಬಲ್ಲಿ ಬಹುವಚನ ಸೇರಿಕೊಂಡುದು ಪ್ರತಿಕಾರರಿಂದೆಂಬಂಶ ಹಿಂದು ಮುಂದಿನ 'ವಂದಿಪ ನಾನು ಪೇಳುವೆ ಎನಗೆ ಆಳವಲ್ಲವು ಕೊಂಡಾಡುವೆ' ಇತ್ಯಾದಿ ಉಕ್ತಿಗಳಿಂದಲೇ ಸ್ಪಷ್ಟ ಮೈ ವಿಶ್ವವಿದ್ಯಾಲಯದ ದೀರ್ಘ ಕೃತಿಗಳಲ್ಲಿರುವ 'ಸುವ್ವಾಲಿ'ಯೂ ಪಾಠಕೆಟ್ಟ ಬೆಂಗಳೂರಿನ ಮುದ್ರಿತ ಪ್ರತಿಯನ್ನಾಧರಿಸಿದೆ! ಉಡುಪಿಯ ಎರಡು ಮುದ್ರಿತ ಪ್ರತಿ ಗಮನಿಸದೆಯೂ, ಅವನ್ನನುಸರಿಸುವ ಹಸ್ತಪ್ರತಿ ಅನುಲಕ್ಷಿಸಿ, ಅನಿವಾರ್ಯವಾಗಿ ಎರಡು ಆಕರಗಳಲ್ಲಿರುವುದರಿಂದ 'ಸದ್ಯಕ್ಕೆ ವಾದಿ

ರಾಜರದೆಂದು ಪರಿಗಣಿಸಿದೆ. ಆದರೆ ಪಾಠ ಕೆಟ್ಟು ವಾದಿರಾಜರದೆನ್ನುವುದೇ ಕಷ್ಟವಾಗುತ್ತದ'ಂತೆ! ಇನ್ನು ವಾದಿರಾಜರೇ ಉತ್ತರ ಕರ್ನಾಟಕಸ್ಥರಿಂದ ಬರೆಯಿಸಿದ 'ನಿರ್ಣಯ ಟೀಕೆ,' ೧೮೯೧ ರಲ್ಲಿ ಓಲೆಯ ರೂಪದಿಂದ ಪ್ರಕಟವಾದ್ದನ್ನಷ್ಟೇ ನೋಡಿದವರಿಗೆ, ಈಚಿನ ಯಾರೋ ಬರೆದುದೆನ್ನಿಸುವುದು ಸಹಜ.

ಏಕಾಕರದ ಕೃತಿಗಳನ್ನು ಅಧಿಕೃತವೆನ್ನಲಾಗದು. ಆದರೆ 'ವಾದಿರಾಜರ ಕೃತಿಗಳ' ಏಕಾಕರದ ೧೦೯ನೆಯ 'ರುಗ್ಮಭೂಷಣ' ಕೀರ್ತನೆ ಅನ್ಯ ಅಂಕಿತದಲ್ಲೂ ಉಪಲಬ್ಧವಾಗಿರುವುದರಿಂದ 'ಭಿನ್ನ ಆಕರ ದೊರೆತು ಅದರ ಅಸ್ತಿತ್ವ ಭದ್ರವಾಯಿತು' (-ಡಾ॥ ವರದರಾಜರಾವ್, ಬಾಲಲೀಲೆಯ ಸವಿನುಡಿ xiii; ಅದೇ ವಿಷಯ ಬಾಲಲೀಲೆಯ ಅಂತ್ಯಕ್ಕೂ ಉಕ್ತ). ಹೆಚ್ಚು ಆಕರ ಲಭಿಸಿದಂತೆ ಅಂಕಿತ ಸಂದಿಗ್ಧವೂ ಪರಿಹಾರ ಹೊಂದುವುದು. 'ಬಾಲಲೀಲೆ-ಸುವ್ವಾಲಿ'ಗಳ ಎರಡೂ ಆಕರಗಳೂ ಒಂದೇ ಅಂಕಿತ ಹೊಂದಿರುವುದರಿಂದ, ಅವುಗಳ ಅಸ್ತಿತ್ವ-ಕರ್ತೃತ್ವಗಳೆರಡೂ ಸ್ಥಿರವಾದುವು. 'ತಾತ್ಪರ್ಯ ನಿರ್ಣಯ'ದ ಪ್ರಕಟನಾ ಪೂರ್ವದ ಎರಡು (೧೮೫೩–೫೫) ಹಸ್ತಪ್ರತಿ ನನ್ನಲ್ಲಿದ್ದು, ಬೆಂಗಳೂರಿನ ತ್ರೈಲೋಕ್ಯಾಚಾರ್ಯ ಸೇವಾ ಸಂಘದವರ ಪ್ರಕಟನೆಗೆ ಇನ್ನೆರಡು ಹಸ್ತಪ್ರತಿ ಒದಗಿದ್ದು, ಅದರ ಅಸ್ತಿತ್ವ-ಕರ್ತೃತ್ವಗಳನ್ನು ಗಟ್ಟಿಗೊಳಿಸದೇ?

ಪ್ರಸ್ತುತ 'ಅವತಾರ ತ್ರಯ ಸುವ್ವಾಲಿ' ಭಿನ್ನ ಆಕರಗಳ ತೌಲನಿಕ ಅಧ್ಯಯನದ ಫಲವಾಗಿದೆ; ನಮ್ಮ ನಾಡಿಗರ ಬಾಯಲ್ಲಿರುವ ಪಾಠಕ್ಕೂ ಶುದ್ಧರೂಪ ಒದಗಿಸುತ್ತದೆ. ಇದರ ಸಂಪಾದನೆಯ ಪ್ರತಿಫಲನ [ಪಾಠಾಂತರ ಸಹ] ಟಿಪ್ಪಣಿಗಳಲ್ಲಿದೆ.

ಅವತಾರತ್ರಯವೆಂದರೆ ಹನುಮ ಭೀಮ-ಮಧ್ವರವು. ವಾಯುವಿನ ಈ ಮೂರು ಅವತಾರ ಕಥನಕ್ಕೆ ಇಲ್ಲಿ ೩೩೨ ದ್ವಿಪದಿಗಳನ್ನು ಸುವ್ವಿಗಳ ಆಲಿಯೊಡನೆ ಪಲ್ಲವಿಯಾಗಿ ಬಳಸಿದ್ದರಿಂದ ಇದು 'ಅವತಾರತ್ರಯ

ಸುವ್ವಾಲಿ' ಎನಿಸಿದೆ. ವಾದಿರಾಜರಿಗೆ ಪ್ರಿಯವಾಗಿ ಅವರೆಲ್ಲ ಕೃತಿಗಳಲ್ಲಿರುವ ದಶಾವತಾರ ನಿರೂಪಣ ಇದರಾದಿಯಲ್ಲಿರುವುದು ಅವರ ಕರ್ತೃತ್ವಕ್ಕೇ ಪೋಷಕ. ಭಾರತೀಶ ರಾಮದೂತನಾಗಿ ಲಂಕೆಗೈದಿ ಸೀತೆಯ ಸುದ್ದಿ ತಂದ ಸುಂದರಕಾಂಡ ರಾಮಾಯಣ ವೃತ್ತ 'ಹನುಮ ಸುವ್ವಾಲಿ'ಯದು. ರಾಮ-ಹನುಮ ಕೃಷ್ಣ-ಭೀಮರಾದಂಶ ಇದರಂತ್ಯಕ್ಕೆ ಸೂಚಿತ. ಭೀಮಾವತಾರ ದಿಂದ ಕೌರವಾಂತ್ಯದ ವರೆಗಿನ ಕಥೆ 'ಭೀಮ ಸುವ್ವಾಲಿ'ಯಲ್ಲಿದೆ. ಸಹಜ ವಾಗಿ ಇಲ್ಲಿ ಕೃಷ್ಣಾವತಾರದ (ಉತ್ತರಾರ್ಧದ) ಕಥೆ ಹೆಣೆದುಕೊಂಡು, 'ಬಾಲಲೀಲೆ'ಯೂ ಇದೇ ಛಂದದಲ್ಲಿರುವುದರಿಂದ, ಕೆಲವು ನುಡಿ ಎರಡಕ್ಕೂ ಸಮಾನವಾಗಿವೆ. ವಾಯು ಮಧ್ವರಾದ ಕಥನ ಕೊನೆಯ 'ಮಧ್ವ ಸುವ್ವಾಲಿ'. ಇದು ಮಧ್ವರ ಕಿರಿಯ ಸಮಕಾಲೀನ ನಾರಾಯಣ ಪಂಡಿತರ 'ಸುಮಧ್ವ ವಿಜಯ' ಹಾಗೂ ಹೃಷಿಕೇಶತೀರ್ಥರ 'ಸಂಪ್ರದಾಯ ಪದ್ಧತಿ' ಗಳನ್ನಾಧರಿಸಿದ ಕಾರಣ, ಮೂಲಾನುಸಾರ ಇಲ್ಲಿಯ ನುಡಿಗಳನ್ನು ಜೋಡಿಸಿ, ಕೆಟ್ಟ ಪಾಠ ಸರಿಪಡಿಸಿದೆ.

ದಶಾವತಾರ-ಕೃಷ್ಣಾವತಾರಗಳಂತೆ ವಾಯು ಅವತಾರತ್ರಯವೂ ವಾದಿರಾಜರಿಗೆ ಪ್ರಿಯವಾದ ಅಂಶ ಇವುಗಳ ಪುನರುಕ್ತಿಯಿಂದಲೇ ಸ್ಪಷ್ಟ. 'ಕೀಚಕವಧೆ'ಯಲ್ಲಿ ವಿರಾಟಪರ್ವದ ಭೀಮ ವೃತ್ತಾಂತವನ್ನಷ್ಟೇ ವರ್ಣಿಸಿದ ಅವರು, ಇಲ್ಲಿ ಮೂರೂ ಅವತಾರಗಳ ಕಥೆಯನ್ನು ಮತ್ತೂ ದೇಸೀ ಯವಾದ ಛಂದಸ್ಸಿನಲ್ಲಿ ಸಂಗ್ರಹಿಸಿದ್ದಾರೆ. ಇದರಿಂದ 'ಸುಂದರಕಾಂಡ ರಾಮಾಯಣ ಸಂಕ್ಷಿಪ್ತ ಭಾರತ-ಅಣು ಮಧ್ವವಿಜಯ'ಗಳನ್ನು ಕನ್ನಡಿಸಿ-ದಂತಾಗಿದೆ. ಮೂಲ ಆಕರಗಳ ದೃಷ್ಟಿಯಿಂದ ಇದು ತುಂಬ ಕಿರಿದಾದರೂ, ೨೭ ಚೌಪದಿಗಳಲ್ಲೇ ಮೂರೂ ಅವತಾರ ಚಿತ್ರಿಸಿದ ಶ್ರೀಪಾದರಾಯರ 'ಮಧ್ವನಾಮ'ಕ್ಕಿಂತ ಹಿರಿದು. ಆದರೂ ಡಾ। ವರದರಾಜರಾಯರ 'ಹರಿ ದಾಸ ಸಾಹಿತ್ಯ ಸಾರ'ದಲ್ಲಿದು ಅವಗಣಿತ (ಪು. ೧೬೭)!. ಇಂತು ಸೀತೆ-ದ್ರೌಪದಿ-ವೇದಮಾತೆಯರ ಸೇವೆಗವತರಿಸಿದವರನ್ನು ಏಕತ್ರ ಹಾಡಿ ತಣಿದ ವಾದಿರಾಜರ ಕೃತಿ ಇದು ವಿಶಿಷ್ಟ.

'ಬಾಲಲೀಲೆ-ಸುವ್ವಾಲಿ'ಗಳ ಏಕಛಂದ-ಪುನರಾವರ್ತನ-ಭಾಷಾಶೈಲಿ

ಗಮನಿಸಿದರೆ ವಾದಿರಾಜರು ಸೋದೆಯಲ್ಲಿದ್ದ ಕೊನೆಯ ದಶಕಗಳಲ್ಲಿ ರಚಿ-ತವಾದಂತಿವೆ, ಪರಸ್ಪರ ಪ್ರಭಾವಿತ ಎಂಬಂತಿವೆ. ಇವುಗಳಲ್ಲಿ ಯಾವುದು ಮೊದಲು, ಯಾವುದು ನಂತರ ಬಂದುದೆಂದೂಹಿಸುವುದು ಸುಲಭವಲ್ಲ ಆದರೂ ತಾರತಮ್ಯದಂತೆ 'ಬಾಲಲೀಲೆ'ಯ ದೀರ್ಘಕಥನಾನಂತರ 'ಸುವ್ವಾಲಿ' ಮೂಡಿರಬಹುದು.

ಇದರ ಪ್ರಕಟನೆಗೆ ನೆರವು ನೀಡಿದವರಿಗೆ ನಾನು ಕೃತಜ್ಞ. ಇದರಲ್ಲೂ ಇರುವ ತಪ್ಪು ತಿಳಿಸಿದಲ್ಲಿ ಮಾತ್ರ ತಿದ್ದಲೆಡೆಯುಂಟು. ಇದನ್ನೆಲ್ಲ ಸಹೃದ-ಯರಿಗೆ ಬಿಡುವ

೧೫೮೭, ವಖಾರಂತಿ ಬೀದಿ, **ಡಾ। ಎಚ್. ಜಿ. ಲೋಕೂರ**
ಬೆಳಗಾವಿ ೫೯೦೦೦೨
೧೩-೧-೯೩.



ಸಮರ್ಪಣೆ

ತಾಯಿ ಕೃಷ್ಣಾಬಾಯಿಗೆ

# ಅವತಾರತ್ರಯ ಸುವ್ವಾಲಿ

## ೧. ಹನುಮ ಸುವ್ವಾಲಿ

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಾಲಿ ಪಲ್ಲವಿ

[ಸಿರಿಯರಮಣನಾದ] ಶ್ರೀಹರಿಯ ದಿವ್ಯಚರಣಕೆರಗಿ
ಹರುಷದಿಂದ ಭಾರತೀಶರನ್ನು ಭಜಿಸುವೆ ೧

ಅಮರವರ್ಯರೆಲ್ಲ ಕ್ಷೀರಾಬ್ಧಿಯಲ್ಲಿ ಮನೆಯ ಮಾಡಿ
ಕಮಲೆಯೊಡನೆ ರಮಿಸುವ [ಹರಿಯ] ಕಂಡರು ೨

ರಕ್ಷಿಸಯ್ಯ ಲಕ್ಷ್ಮಿಲೋಲ ರಕ್ಷಿಸಯ್ಯ ಭಕ್ತಪಾಲ
ರಕ್ಷಿಸೆಂದು [ಬೇಡಿದರು] ಕುಕ್ಷಿಲೋಲನ ೩

ಮೀನನಾಗಿ [ನಿಗಮಚೋರ] ದಾನವನ ಗೆಲಿದು ಬಂದು
ದಾನ ಮಾಡಿದೆಯೋ ವೇದಾದಿ [ವಿದ್ಯವ] ೪

ಮಂದರಾದ್ರಿ ಹಾಕಿ ಜಲಧಿ ಮಥಿಸುತಿರಲು ಕೂರ್ಮರೂಪ-
ದಿಂದ ಹೋಗಿ ಅಮೃತವನ್ನು ತಂದು ನೀಡಿದೆ ೫

ವರಹನಾಗಿ ಹಿರಣ್ಯಾಕ್ಷನ ವಧೆಯಮಾಡಿ ಗೆಲಿದು ಬಂದೆ
ಧರಣಿ ಎತ್ತಿ ನಮ್ಮ ಸಲಹಿದಾತನಲ್ಲವೆ ೬

ಮಗನ ಹಗೆಯ [ಬಗೆದು] ದೈತ್ಯ ಮತ್ಸರವ ಮಾಡುತಿರಲು
ನೃಮೃಗನರರ ರೂಪದಿಂದ ಮಗನ ಸಲಹಿದೆ ೭

[ಇಂದ್ರನ ಲೋಕ] ಬಲೀಂದ್ರನಪಹರಿಸುತಿರಲು ಉ-
ಪೇಂದ್ರನಾಗಿ ತಂದ ಮಧುಸೂದನನಲ್ಲವೆ ೮

ಎರಡು ಹತ್ತು ಒಂದು ಬಾರಿ ಧರಣಿ ನಾಯಕರ ಗೆಲಿದು
ಪರಶುರಾಮನಾಗಿ ನೀ ಪ್ರಕಟನಾದೆಯಾ ೯

ಈಗ ಮತ್ತೆ ಕುಂಭಕರ್ಣ ರಾವಣಾದಿ ಅಸುರರೆಲ್ಲ
ಆಗ ಭೋಗದಿಂದ [ಹತರಾಗುತಿದ್ದರು] ೧೦

ಅಂದು ಮಥುರಪಟ್ಟಣ ಹೊಕ್ಕು ಮಾವ ಕಂಸನ ಕೊಂದು
ತಂದೆತಾಯಿಯರ ಬಂಧನವ ಬಿಡಿಸಿದೆ ೧೧

ತ್ರಿಪುರರ ಸತಿಯರ ವ್ರತಗಳನ್ನು ಅಪಹರಿಸಿ
ನಿಪುಣನಾಗಿ ಗೆಲಿದು ಬಂದ ಚಪಲನಲ್ಲವೆ ೧೨

[ಕಲ್ಕ್ಯವತಾರನಾಗಿ] ಕೈಲಿ ಖಡ್ಗವನ್ನು ಪಿಡಿದು
ಲೆಕ್ಕವಿಲ್ಲದ ದುಷ್ಟರ ಗೆಲಿದ ದಿಟ್ಟನಲ್ಲವೆ ೧೩

ಸುರರ ಮೊರೆಯ ಕೇಳಿದ ಗರುಡಗಮನ ರಾಮನಾದ
ಹರುಷದಿಂದ ಭಾರತೀಶ [ಹನುಮನಾದನು] ೧೪

ತಂದೆತಾಯಿಯರ ಮಾತು ತಪ್ಪದೀಶ ಈ ವನಕ್ಕೆ
ಬಂದು ರಾಘವರ ಪಾದಪದ್ಮಕೆರಗಿದ ೧

ಮಿತ್ರತನವ ಕೂಡಿ ಸೌಮಿತ್ರಿ ಪೂರ್ವ ಭೋಗ ಬಹಳ
ಮಿತ್ರತನವ ನಡೆಸಿದನಾ ಪುತ್ರ ಹನುಮನು ೧೬

ಮುದ್ರೆ ತೆಗೆದುಕೊಂಡು ಸಮುದ್ರ ದಾಟಿ ಹನುಮಂತ
[ಶೀಘ್ರದಿಂದ] ಲಂಕೆಯ ಹೊಕ್ಕು ನೋಡಿದ ೧೭

ಅತಿಕಾಯ ಇಂದ್ರಜಿತು ಕುಂಭಕರ್ಣರ ಅರಮನೆಯ
ಉಸಿರು ಬಿಡದೆ ಹನುಮಂತ ಹುಡುಕುತಿದ್ದನು ೧೮

ಅಂತಃಪುರದ ಮನೆಯ ಹೊಕ್ಕು ನಿಂತು ನೋಡಿದ ಹನುಮಂತ
ಮಂಚದಲ್ಲಿ ಮಂಡೋದರಿ ಮಲಗಿದ್ದಳು ೧೯

ತಾಯಿ ಎಂದು ಬಗೆದು ಬಹಳ ಕೋಪವನ್ನು ತಾಳಿ
ವಾಯುಸರೇಖೆ ಕೋರೆದಾಡೆ ಕಂಡ ಹನುಮನು ೨೦

ತಾಯಿ ಜಾನಕಿಗೆ ಪಾದದಲ್ಲಿ ಪದ್ಮರೇಖೆ
ತ್ರಾಹಿ ತ್ರಾಹಿ ಎಂದು ಗಲ್ಲ ಮುಟ್ಟಿಕೊಂಡನು ೨೧

ಆಡಿದ ಮಾತಿಗೆ ಆರುಕೋಟಿ ಗೋದಾನ
ಮಾಡಿದ ಹನುಮ ಅಶೋಕವನಕೆ ಬಂದನು ೨೨

ಮರದ ಕೆಳಗೆ ಸೀತೆ ಇರಲು ಕಂಡು ಹನುಮಂತ
[ಅದೃಶ್ಯರೂಪದಿಂದ] ಮರವನೇರಿದ ೨೩

ಹತ್ತುತಲೆಗೆ ಹತ್ತುಮುತ್ತಿನ ಮುಕುಟ ಇಟ್ಟು
ರತ್ನಪ್ರಭೆಯಿಂದ ಅಸುರ ಇಳಿದು ಬಂದನು ೨೪

ಎತ್ತರದ ಮುತ್ತಿನ ಛತ್ರವ ಹಿಡಿಸಿಕೊಂಡು
ಸೀತೆ ಇದ್ದ ವನಕೆ ಬಂದು ಕಾಡುತಿದ್ದನು ೨೫

ಇತ್ತ ನೋಡೆ ಸೀತೆ ಅಷ್ಟಸೌಭಾಗ್ಯ ಕೊಡುವೆ
ಪಟ್ಟದ ಲಕ್ಷ್ಮಿ ಲಂಕೆ ನಿನಗೆ ಈವೆನೆಂದನು ೨೬

ಹೀಗೆ ನೋಡೆ ಸೀತೆ ನಿನಗೆ ಬಹಳ ಸೌಭಾಗ್ಯಕೊಡುವೆ
ಭಂಡಾರದ ಲಕ್ಷ್ಮಿ ಲಂಕೆ ನಿನಗೆ ಈವೆನೆಂದನು ೨೭

ಪಾವುಡವ ಹಾಸುವರು ಚಾಮರವ ಬೀಸುವರು
ನಾರಿಯರು ಪನ್ನೀರು ಹಿಡಿದು [ತಾಹರು] ೨೮

ಮಂಡೋದರಿ ಕೈಯಿಂದ ಮಂಡೆಯ ಹಿಕ್ಕಿಸುವೆ
ದುಂಡುಮಲ್ಲಿಗೆ ಮುಡಿಸಿ [ಮಡಿಸಿದೆಲೆಯ] ಕೊಡಿಸುವೆ ೨೯

ಆರುಕಾಲಿನ ಮಂಚಕೆ ಹವಳದ ತಲೆದಿಂಬು
[ಒರಗು] ಬಾರ ಸೀತೆ ಎನ್ನ ತೋಳಿಗೆಂದನು ೩೦

ಹತ್ತು ಕಾಲಿನ ಮಂಚಕೆ ಮುತ್ತಿನ ತಲೆದಿಂಬು
ಒಪ್ಪು ಬಾರ ಸೀತೆ ಎನ್ನ ತೋಳಿಗೆಂದನು ೩೧

ಆರುಕಾಲಿನ ಮಂಚಕೆ ಉರಿವ ಕೆಂಡವ ಹಚ್ಚಿ
[ಒರಗುವೆ] ಶ್ರೀರಾಮರ ತೋಳಿಗೆಂದಳು ೩೨

ಹತ್ತುಕಾಲಿನ ಮಂಚಕೆ ಕಿಚ್ಚು ಕೆಂಡವ ಹಚ್ಚಿ
[ಒಪ್ಪುವೆ] ಶ್ರೀರಾಮರ ತೋಳಿಗೆಂದಳು ೩೩

[ಹತ್ತಿರಿದ್ದ ತ್ರಿಜಟೆಯರು ಮಿತ್ರೆಯರು] ಒಂದಾಗಿ
ಸೀತೆಯ ಒಂದುಮಾಡಿ ಕೊಡಿರೆಂದನು ೩೪

ಸೀತೆ ಒಂದಾಗಳೋ ಪಾಪಿ ರಾವಣನೆ ಕೇಳು
ಲಂಕೆಗೆ ಆಳಲು ನೀನು ತಂದುಕೊಂಡೆಯು ೩೫

ಸಿಡಿಲು [ಪೊಟ್ಟಣ] ಕಟ್ಟಿ ಕೆಡಬೇಡ ರಾವಣ
ಸಿಡಿದು ಹೋಗೋ ಕಾಲ ನಿನಗೆ [ಬಂದಿತೆಂದರು] ೩೬

ನಾಳೆ ಇಷ್ಟೊತ್ತಿಗೆ ಶ್ರೀರಾಮರು ಸೇತುವೆ ಕಟ್ಟಿ
ನಿನ್ನ [ಶಿರವು ನೆಲಕೆ ಬೀಳ್ವ ಕನಸ ಕಂಡೆವು] ೩೭

ಕಂಡ ಕನಸು ಹುಸಿಯಲ್ಲ ಮಂಡಮತಿ ಮನೆಗೆ ಹೋಗು
ಸೀತೆಯ ಬಿಟ್ಟು ಸುಖಿಯಾಗು ಎಂದರು ೩೮

ಅತ್ತಲಿಂದ ರಾವಣ ಕೋಟೆಯೊಳಗೆ ಹೋಗುತಿರಲು
ಇತ್ತಲಿಂದ ಹನುಮಂತ ಮರವನಿಳಿದನು ೩೯

ಅಂದು ಒಂದು ಮೃಗವು ಬಂದು ಶ್ರೀರಾಮರ ಅಗಲಿಸಿತು
ಇಂದು ಅಸುರ ಕಪಿಯ ನಿನ್ನ [ಕಳುಹಿ] ಕೊಟ್ಟನೆ ೪೦

ಅಂಜನೆಯ ಕಂದನು ವಾಯು ಕುಮಾರನು
ರಾಮಮುದ್ರಿಕೆ ಕೈಯಲಿಟ್ಟು ಎರಗಿ ನಿಂತನು ೪೧

ಉಂಗುರವ ಕಂಡು ಸೀತೆ ಕಂಗಳಿಗೆ ಒತ್ತಿಕೊಂಡು
[ಉರದಲಪ್ಪಿ ಶಿರದಲಿಟ್ಟು ಕೇಳುತಿದ್ದಳು] ೪೨

ಏನಯ್ಯ ಹನುಮಂತ ಶ್ರೀರಾಮರು ಕ್ಷೇಮವೇ
ಪ್ರೇಮದಿಂದ ಒಮ್ಮೆಗಾದರೂ ಎನ್ನ ನೆನೆವರೆ ೪

ನಿಮ್ಮ ಧ್ಯಾನವೆ ತಾಯಿ ಕಂಗಳಿಗೆ ನಿದ್ರೆಯಿಲ್ಲ
ನಿಮ್ಮ ಹೊರತಾಗಿ ಅನ್ಯಥಾ ಇಲ್ಲವು ೪೪

ಹವಳದ ಕುಡಿಯಂತೆ [ಹೊಳೆಯುತಿರೆ] ರಾಮರು
ಅಯೋಧ್ಯಪಟ್ಟಣ ತಮಗೆ ಅಡವಿ ಎಂದರು ೪೫

ತಾಯಿ ನಿಮ್ಮ ಹೆಗಲಲಿಟ್ಟು ವಾರಿಧಿಯ ದಾಟಿಸುವೆ
ತಾಯಿ [ಚಿತ್ತೈಸಿ] ಎಂದು ನುಡಿದ ಹನುಮನು ೪೬

[ಹತ್ತಿರಿದ್ದ ದೂತರೆಲ್ಲ ಸುತ್ತು ಕಟ್ಟಿ ಬಾಹರು]
ಮತ್ತೆ ಎನ್ನ ಕೊಂಡು ಹೇಗೆ ಶರಧಿ ದಾಟುವಿ ೪೭

ಬಾಲದಿಂದ ರಕ್ಕಸರ ಲೀಲೆಯಿಂದ ಕೊಲ್ಲುವೆ
ತಾಯಿ [ಚಿತ್ತೈಸಿ] ಎಂದು ನುಡಿದ ಹನುಮನು ೪೮

ಸಾಲದು ಧೈರ್ಯವು ನೀನು ಹೋಗಿ ಬೇಗನೆ
[ಶ್ರೀರಾಮರ ಒಡಗೊಂಡು ಬಾರೊ ಎಂದಳು] ೪೯

ಮನದಿ ಹರ್ಷವನ್ನು ತಾಳಿ ಮಣಿಯ ಕೊಟ್ಟಳಾಗಲೆ
ಮಣಿಯ ಕೊಂಡು ಹನುಮಂತ [ಹೊರಟು ನಿಂತನು] ೫೦

ಅಮ್ಮ ಹಸಿದೆನೆಂದರೆ ಬಿದ್ದ ಹಣ್ಣು ಮೆಲ್ಲೆನೆನಲು
ಹೆಮ್ಮರವ [ಕಿತ್ತಿ ಕೆಡವಿ] ಹಣ್ಣ ಮೆದ್ದನು ೫೧

ಮಣಿಯ ಕೊಂಡು ಹನುಮಂತ ನಿಂಬೆಯ ವನವ ಪೊಕ್ಕು
ನಿಂಬೆವನಗಳೆಲ್ಲ ಕಿತ್ತಿ ದೊಂಬಿ ಮಾಡಿದ ೫೨

ಅಕ್ಷಯಕುಮಾರನ ಕುಟ್ಟಿ ಕೆಡಹಿದ ಹನುಮ
ಬಾಳೆ ವನಗಳೆಲ್ಲ ಕಿತ್ತಿ ಧೂಳಿ ಮಾಡಿದ ೫೩

ಅಕ್ಷಯನಂದನಾದಿ ಘೋರ ರಾಕ್ಷಸರ ಸಂಹರಿಸಿ
ದಕ್ಷವೃಕ್ಷಗಳೆಲ್ಲ ಕಿತ್ತಿದ ರಾಕ್ಷಸರೌದ್ರನು ೫೪

ಕಾವಲಿದ್ದ ದೂತರೆಲ್ಲ ರಾವಣಗೆ ಹೇಳಲು
ಹಿಡಿದು ತನ್ನಿರೆನುತ ಭೃತ್ಯರೊಡನೆ ನುಡಿದನು ೫೫

ಹನುಮ ಸಿಕ್ಕಿದನು ಎಂದು ಬ್ರಹ್ಮಾಸ್ತ್ರ ತರಲು
ಹಲ್ಲು ಕಿರಿದು ಬೀದಿಯೊಳಗೆ ನಗುತ ನಿಂತನು ೫೬

ಇಂದ್ರಜಿತು ಬಂದು ಬ್ರಹ್ಮಾಸ್ತ್ರದಿಂದ ಕಟ್ಟಿ ಒಯ್ದು
ಮುಂದಿಡಲು ರಾವಣೇಶ ನಸುನಕ್ಕನು ೫೭

[ಯಾವ] ದೇಶದಿಂದ ಬಂದೆ [ಯಾರ] ಕಂದನೆನುತಲಿ
[ರಾವಣೇಶ] ಕೇಳಿದನು ವಾನರೇಶನ ೫೮

ನಮ್ಮ ಒಡೆಯ ರಾಮಚಂದ್ರ ಎನಗೆ ಹನುಮನೆಂಬರು
ಹೆಮ್ಮೆ ನಿನಗೆ ಬೇಡ ಶರಣೆನ್ನು ರಾವಣ ೫೯

ನಮ್ಮ ಬಂಟನಾದರೆ ಭೂಮಿ ಸಾಮ್ರಾಜ್ಯ ಕೊಡುವೆ
ತಳಿಗೆ ತಾಂಬೂಲ ತಂದು ಕೊಟ್ಟರ್ಹನುಮಗೆ ೬೦

ಕೊಟ್ಟ ತಾಂಬೂಲವನ್ನು ತಟ್ಟಿಗ್ಹಾಕಿದ ಹನುಮಂತ
ಕುಟ್ಟಿನಿನ್ನ ಕೆಡಹೋದು ನೀ ಅರಿಯೆ ಎಂದನು ೬೧

ಅಲ್ಪ ನೀನು ಸತ್ಯಸಂಕಲ್ಪನೊಳುವ್ವೈರ [ಬೆಳಸಿ]
ಅಲ್ಪ ಭಾಗ್ಯವಾಯ್ತು ನಿನಗೆ ತಪ್ಪದೆಂದನು ೬೨

ನುಡಿಗಳೆಲ್ಲವೇಕೋಭಾವ ಒಡೆಯ ಕೇಳಿ ಕುಪಿತನಾಗಿ
ಹಿಡಿದು ಬಡಿಯಿರೆನುತ ಭೃತ್ಯರೊಡನೆ ನುಡಿದನು ೬೩

ದೂತನ ಕೊಲ್ಲುವುದು ನೀತಿಯಲ್ಲವೆಂದರೆ
ಮಾತನಾಡದೆ ವನವನೇಕೆ ಮುರಿದೆ ಎಂದರು ೬೪

ನಾನು ಮುರಿಯಲಿಲ್ಲ ಎನ್ನ ಬಾಲ ಮುರಿಯಿತೆಂದೆನುತ
ಲೀಲೆಯಿಂದ ಹನುಮ ತನ್ನ ಬಾಲ ತೋರಿದ ೬೫

ಬಾಲಕ್ಕೆ ಶಿಕ್ಷೆಯ ಮಾಡಿಸುವೆ ಕೇಳೆನುತ
[ಹೇಳಿದನು ಅಸುರ ತನ್ನ ಆಳು ಮಂದಿಗೆ] ೬೬

ಚಂದ್ರಶಾಲೆಯ ಹೊಕ್ಕು [ಜವಳಿಯ ತೆಗೆದುಕೊಂಡು]
ತಂದು ಸುತ್ತಿದರು ಹನುಮಂತನ ಬಾಲಕೆ ೬೭

ಕುಂಭಕರ್ಣನ ಮನೆಯ ಹೊಕ್ಕು [ಜವಳಿಯ ತೆಗೆದುಕೊಂಡು]
ತಂದು ಸುತ್ತಿದರು ಹನುಮಂತನ ಬಾಲಕೆ ೭೮

ಇಂದ್ರಜಿತನ ಮನೆಯ ಹೊಕ್ಕು ಪೆಂಡೆಗಳ ತೆಗೆದುಕೊಂಡು
ತಂದು ಸುತ್ತಿದರು ಹನುಮಂತನ ಬಾಲಕೆ ೭೯

ಎಷ್ಟು ಬಟ್ಟೆ ಸುತ್ತಿದರೂ ಮತ್ತೆ ಬಾಲ ಬೆಳೆಯುತಿರೆ
[ವನದ ಸೀತೆ ಸೀರೆ ಸೆಳೆದು] ತನ್ನಿರೆಂದನು ೮೦

ಆಡಿದ ಮಾತನು ಕೇಳಿದನು ಬೇಗನೆ
ಲೀಲೆಯಿಂದ ಹನುಮ ತನ್ನ ಬಾಲ ಮುದುರಿದ ೮೧

ಅತಿಕಾಯ ಇಂದ್ರಜಿತು [ಕುಂಭಕರ್ಣ ಮೊದಲಾಗಿ]
ಅದ್ದಿ ತೈಲದೊಳಗೆ ದೀಪ ಮುಟ್ಟಿಸಿದರು ೮೨

ಮುಟ್ಟಿಸಿದ ಮಾತ್ರದಿಂದ ಉಪ್ಪರಿಗೆ ಏರಿದನು
ಉಪ್ಪರಿಗೆ ಸಾಲು ಉರಿದು ಕುಪ್ಪೆ ಬಿದ್ದವು ೮೩

ಮಾಳಿಗೆ ಮನೆಯ ಸುಟ್ಟು ಚಂದ್ರಶಾಲೆಯ ಸುಟ್ಟು
ಮಾಳಿಗೆ ಮನೆಗಳೆಲ್ಲ ಧೂಳಿಯಾದುವು ೮೪

ತಪ್ಪದೆ ಮನೆ ಮನೆಯ ಉಪ್ಪರಿಗೆ ಎಲ್ಲ ಸುಟ್ಟು
ಮತ್ತೆ ವಿಭೀಷಣನ ಮನೆಯ ತಪ್ಪಿಸಿದನು ೮೫

ಸೀತೆ ಇದ್ದ ವನವ ಬಿಟ್ಟು ಮಿಕ್ಕ ವನಗಳೆಲ್ಲ ಸುಟ್ಟು
ಯಾತುಧಾನಪತಿಯ ಗಡ್ಡವನ್ನೆ ಸುಟ್ಟನು ೮೬

ಹಾರುತ ಜಿಗಿಯುತ ದಂತ ತೋರಿ ನಗುತಲಿ
ಪಂಥವಾಡಿ ಗೆದ್ದ ಹನುಮಂತರಾಯನು ೮೭

ತೈಲಜ್ವಾಲದಿಂದ ಪುರವ ಸುಟ್ಟು ಬೂದಿಮಾಡೆ
[ಯಾರ] ಬಂಟನೆನುತ ವಿಶ್ವಕರ್ಮ ಕೇಳಿದ ೮೮

ಸರ್ಪ ಕಾಳಿಂಗನ ತುಳಿದ ಗೋವುಗಳನು ಕಾಯ್ದ
ತಾಟಕಿಯ ಮೂಗು ಕೊಯ್ದ ರಾಮರ ಬಂಟನು ೮೯

ಮುರಳಿ ಶರಧಿ ದಾಟಿ ರಾಮರ ಚರಣಕಮಲಗಳಿಗೆ ಬಾಗಿ
[ಹರುಷದಿಂದ] ಮಣಿಯ ಕೊಟ್ಟು ಎರಗಿ ನಿಂತನು ೮೦

ಪ್ರೀತಿಯಿಂದ ರಾಮಚಂದ್ರ ವಾತತನಯನ್ನಪ್ಪಿಕೊಂಡು
ಯಾತುಧಾನ ಕಥೆಯ ಸಂವಾದ [ಮಾಡಿದರು] ೮೧

ರಣಕೆ ಬಂದ ರಕ್ಕಸರ [ಎಣಿಕೆಯಿಲ್ಲದೆ] ಕೊಂದು ಬಿಸುಟು
ಮನವ ನಿಲ್ಲಿಸಿದ ನಮ್ಮ ಘನ ಹನುಮನು ೮೨

ಶರಧಿ ಸೇತುವೆಯ ಕಟ್ಟಿ ದುರುಳ ರಾವಣನ ಕೊಂದು
ಪುರವ ಅನುಜಗಿತ್ತರು ರಾಮಚಂದ್ರರು ೮೩

ಜಾನಕಿ ಸಹಿತ ಜಗವ ಪಾಲಿಸುವ ರಾಮರ
ತಾನೆ ಭಜಿಸಿ ಸುಖದಲಿದ್ದ ವಾನರೇಶನು ೮೪

ರಘು ಕುಲೇಶ ರಾಮನಾದ ಯದು ಕುಲೇಶ [ಕೃಷ್ಣನಾದ]
ಹನುಮ [ಸೇವಾರ್ಥ] ಕುಂತಿತನಯನಾದನು ೮೫

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಾಲಿ ಪಲ್ಲವಿ



# ಅವತಾರತ್ರಯ ಸುವ್ವಾಲಿ

## ೨. ಭೀಮ ಸುವ್ವಾಲಿ

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಾಲಿ    ಪಲ್ಲವಿ

ಹುಲಿಗೆ ಬೆದರಿ ಕುಂತಿದೇವಿ ಚರಿಸಿ ಮಗನ ಬಿಸುಟಳು
ಹಲವು ಪರಿಯಲಿ ಗಿರಿಯು ನುಚ್ಚಾಗಿ ಹೋಯಿತು    ೧

ಕಂದಗಳೈವರ ಪಡೆದಳು ಕುಂತಿದೇವಿ
ಅಡವಿಯಲ್ಲಿ ರಾಯ ಅಂತರಿಸಿ ಹೋದನು    ೨

ಕಂಡು ವೇದವ್ಯಾಸರು ಬಾಲಕರ ಕರೆದು ತಂದು
ಕಂದಗಳ ನೋಡಿ ನೀವು ಸಲಹಿರೆಂದರು    ೩

ಬೇರೆ ಮನೆಯನು ಕಟ್ಟಿ ದಾಯಾದರ ಕಾವಲಿಟ್ಟು
ಓದು ಬರಹಗಳನು ಹೇಳಿ ಕಲಿಸುತಿದ್ದರು    ೪

ಭೀಮಸೇನನೆಂಬ ದಿವ್ಯನಾಮವನ್ನು ಇಟ್ಟುಕೊಂಡು
ಸೋಮ ಕುಲದಲಿ ಉದಿಸಿದರು ಸಾರ್ವಭೌಮರು    ೫

ಹಾರುಗುಬ್ಬಿ ಮುಷ್ಟಿಯುದ್ಧ ನೀರು ಚೆಲ್ಲಾಟದಿ
ಶೌರ್ಯದಿಂದ ರಾಜನಂದನರ ಗೆಲಿದರು    ೬

ಕುರುಗಳೆಲ್ಲ ಮರವನೇರಿ ಫಲಗಳುದುರಿ ಸರುವ ವೃಕ್ಷ
ಚೆಲುವ ಪಾದದಲೊದ್ದು ಹಣ್ಣು ದಣಿಯ ಮೆದ್ದರು    ೭

ಪಾದ ಕರಗಳಲಿ ಲೋಹಪಾಶದಿಂದ ಬಿಗಿದು ಕಟ್ಟಿ
ಪ್ರಾಸಾದವೇರಿ ಕೆಡವಲು ಅಮರಜನರೆದ್ದರು ೮

ರಾಷ್ಟ್ರಕ್ಕೆ ಶಕುನಿಮುಖ್ಯದೂತರೆಲ್ಲ ವಿಷವನಿಕ್ಕೆ
ಕೋಷ್ಟದಲ್ಲಿ ಜೀರ್ಣವಾಯ್ತು ಪವನತನಯಗೆ ೯

ಕಲಿ ಮಂತ್ರದಿಂದ ಜ್ವಾಲೆಗರಳ ಸುರಿವ ಫಣಿಗಳಿಂದ
ಪವನ ಸುತನ [ಕಚ್ಚಿಸುತಿರಲು] ಪಚನವಾಯಿತು ೧೦

ಅರಗಿನ ಮನೆಯೊಳಗೆ ಹಾನಿ ಬಗೆಯ ಬಂದವರ
ಹುರಿದು ದಹಿಸಿ ಸಲಹಿದ ಭೀಮ ಹರಸಿ ಭಕ್ತರ ೧೧

ಸೊಕ್ಕಿದ ಹಿಡಿಂಬನೆಂಬ ರಕ್ಕಸನ ಕೊಂದು ಬಿಸುಟು
ಮೆಚ್ಚಿ ಬಂದ ರಾಕ್ಷಸಿಯ ರಕ್ಷಿಸಿದನು ೧೨

ಹಿಡಿಂಬಾಸುರನ ಕೊಂದು ಹಿಡಿಂಬೆಯ ಮದುವೆಯಾಗಿ
ವ್ಯಾಸರಾಜ್ಞೆಯಿಂದ ಭೀಮ ಮಗನ ಪಡೆದನು ೧೩

ಆಕ್ಷಣ ವೇದವ್ಯಾಸ ಮುನಿಯು ಬಂದು ಹೇಳಲು
ರಾಕ್ಷಸಿಯಲ್ಲಿ ಪುತ್ರನ ಪಡೆದ ಭೀಮನು ೧೪

ಏಕಾಂತದಿಂದಲಿ ಏಕಚಕ್ರನಗರಕ್ಹೋಗಿ
ಶ್ರೀಕಾಂತನಾಜ್ಞೆಯಿಂದ ವಾಸವಾದರು ೧೫

ಬಕನ [ಬಾಧೆತಾಳದೆ ಅಖಿಳ ಜನರು ಕಂಗೆಡಲು]
ಸುಖವ ಮಾಡಿ ಕೊಟ್ಟವಾಯುಸುತ ಭೀಮನು ೧೬

ಇಂದಿರೇಶನ ಸ್ಮರಣೆ ಮಾಡಿ ಭಂಡಿ ಮೇಲೆ ಅನ್ನ ಉಂಡು
ಬಂದು ಬಕನ ಸೀಳಿ ತೋರಣವ ಕಟ್ಟಿದ ೧೭

ಭೀಮ ಸಲಹುತಿರಲು ವಿಭೀತರಾಗಿ ಜನರು ಎಲ್ಲ
ಕಾಮಪೂರ್ಣವಾದರೇಕಾಂತ ಭಕ್ತರು ೧೮

ಅರಸು ಮಕ್ಕಳು ಸ್ವಯಂವರಕ ಬರಲು ವಿಪ್ರವೇಷ
ಧರಿಸಿಕೊಂಡು ಪಾಂಚಾಲ ಪುರಕೆ ಬಂದರು ೧೯

ಕುಂಬಾರನ ಮನೆಯೊಳಗೆ ಕುಂತಿದೇವಿಯನ್ನು ಬಿಟ್ಟು<br>
ಐವರೂ ಒಂದಾಗಿ ಬರುತಲಿದ್ದರು ೨೦

ವಿಪ್ರವೇಷವನ್ನು ಧರಿಸಿ ಮಾರ್ಗದೊಳಗೆ ಬರುತಿರಲು<br>
ಚಿತ್ರಸೇನ ಗಂಧರ್ವ ಅಡ್ಡಗಟ್ಟಿದ ೨೧

ಅರ್ಜುನನ ಕೂಡ ಯುದ್ಧ ಮಾಡೆ ಗಂಧರ್ವನು<br>
ಅವನ ರಥವು ಸಹಿತ ಸುಟ್ಟು ಭಸ್ಮವಾಯಿತು ೨೨

ಅಂಗಾರವರ್ಮನೆಂಬ ನಾಮ ಗಂಧರ್ವಗೆ<br>
ಅಶ್ವ ಗುರುದಕ್ಷಿಣೆ ಕೊಟ್ಟು ಮುಂದೆ ಹೋದನು ೨೩

ಧೌಮ್ಯಾಚಾರ್ಯರ ಕೂಡಿಕೊಂಡು ಬಂದರು ಪಾಂಡವರು<br>
ಕುಂಬಾರ ಶಾಲೆಯಲ್ಲಿ ಬಿಡಾರ ಬಿಟ್ಟರು ೨೪

ಭಿಕ್ಷೆ ಬೇಡಿ ಬಕನ ಕೊಂದು ವಿಪ್ರರ ನಡುವಿರಲು<br>
ಕೃಷ್ಣ ಕರೆದು ಸಾತ್ಯಕಿಯು ತೋರಿಸಿದನು ೨೫

ಖಡ್ಗವೆತ್ತಿ ಸಭೆಯೊಳಗೆ ನಿಂತಿರಲು ಬಲರಾಮ<br>
ಅತ್ತೆಯ ಸೊಸೆ ನಮಗೆ ಏನು ಆಗುವಳೊ ೨೬

ಕೃಷ್ಣನಾಡಿದ ಮಾತಿಗೆ ನಕ್ಕು ಬಲರಾಮನು<br>
ಮನದ ಹರುಷದಿಂದ ಸಂತೋಷಪಟ್ಟನು ೨೭

ಖಡ್ಗ ಹಿಡಿದು ಸಭೆಯೊಳಗೆ ಕುಣಿವ ಸಾತ್ಯಕಿಯು ಕಂಡು<br>
ಫಲ್ಗುಣ ಬಿಲ್ಲ ಹೆದೆಯ ಏರಿಸಿದನು ೨೮

ಉಕ್ಕುವ ಎಣ್ಣೆಯೊಳಗೆ ನೆರಳ ನೋಡಿ ಅರ್ಜುನ<br>
ಮತ್ಸ್ಯಹೊಡೆದು ದ್ರೌಪದಿಯು ಗೆದ್ದ ಫಲ್ಗುಣ ೨೯

ಉಕ್ಕುವ ರಾಯರ ಸೊಕ್ಕುಗಳ ತಗ್ಗಿಸಿ<br>
ಮತ್ಸ್ಯ ಹೊಡೆದು ದ್ರೌಪದಿಯು ಗೆದ್ದ ಫಲ್ಗುಣ ೩೦

ಮುಗುಳು ನಗೆಯಿಂದಲಿ ಕಮಲಮುಖಿ ಮಾಲೆಯನ್ನು<br>
ಫಲ್ಗುಣನ ಕೊರಳಿಗ್ಹಾಕಿ ಬದಿಯಲಿ ನಿಂತಳು ೩೧

ಮುತ್ತಿನಿಂದ ತೆತ್ತಿಸಿದ ರತ್ನದ ಮಾಲೆಯನ್ನು
ಅರ್ಜುನನ ಕೊರಳಿಗ್ಹಾಕಿ ನಗುತ ನಿಂತಳು ೩೨

ಸಿಟ್ಟನಿಂದ ರಾಯರು [ಎತ್ತಿಕೊಂಡರಾಯುಧವ]
ಭಿಕ್ಷುಕರು ಕ್ಷತ್ರಿಯ ಕನ್ನಿಕೆಯ ಒಯ್ವರೆ ೩೩

ಅದೇ ಬಾಣಗಳಿಂದ ಜಗಳಕ್ಹೋದ ಅರ್ಜುನ
ಮರವ ಮುರಿದು ಭೀಮ [ಗೆಲಿದ] ಕೆಲವು ರಾಯರ ೩೪

ಸೋದರ ಮಾವನ ಹಾರಿಸಿದ ಗಗನಕೆ
ಘಾಸಿ [ಆಗದ್ಹಾಂಗೆ ಹಸನಾಗಿ ಇಳುಹಿದ] ೩೫

ರವಿಸುತನ ಬಾಣದಿಂದ ಜಗಳಕ್ಹೋದ ಅರ್ಜುನ
ಯಾರಯ್ಯ ನಿನ್ನ ಸ್ವರೂಪ ತೋರಿಸು ೩೬

ಯಾರಾದರೇನು ನಾನು ಧೀರನಾದರೆ ನಿಲ್ಲು
ಬ್ರಾಹ್ಮಣರ ಗೊಡವೆ ಯಾಕೆಂದು ಕೆರಳಿದ ೩೭

ಭೂಪರೆಲ್ಲ ನೋಡುತಿರಲು ದ್ರೌಪದಿಯು ಗೆದ್ದ ಪಾಂಡು
ಭೂಪ ಸುತರು ಎಲ್ಲ ಮನದಿ ಹರುಷಬಟ್ಟರು ೩೮

ಚಿತ್ರಭೂಷಣ ನೃಪನು ಪುತ್ರಿಗಿತ್ತ ಕುಂತಿದೇವಿಯ
ಪುತ್ರರು ತಂದರು ಮಿತ್ರೆ ಕೃಷ್ಣೆಯ ೩೯

ಬಂದಿರಾ ಕಂದಗಳಿರ ಎಂದು ಕುಂತಿ ಕೇಳಲು
ತಂದೆವೆ ತಾಯಿ ನಿಧಾನವೆಂದರು ೪೦

ತಂದ ಫಲಗಳ ಆನಂದದಿಂದ ಹಂಚಿಕೊಂಡು
ಕಂದರು ನೀವು ಸುಖಿಯಾಗಿರೆಂದು ಹರಸಿದಳು ೪೧

ಭಿಕ್ಷೆ ತಂದೆವೆ ಎಂದು ಸತ್ಯಧರ್ಮ ನುಡಿಯಲು
ಇಟ್ಟುಕೊಂಡು ಐವರು ಉಣ್ಣಿರೆಂದಳು ೪೨

ಅನ್ನವಲ್ಲವೇ ಅಮ್ಮ ಕನ್ಯಾರತ್ನ ತಂದೆವೆಂದು
ಚೆನ್ನಿಗ ಯಮಪುತ್ರ ನಗುತ ನುಡಿದನು ೪೩

ಸ್ತ್ರೀ ರತ್ನವೆಂದು ಭೀಮ ಕೂಡ ಹೇಳಿದನು
ವೇದವ್ಯಾಸರ ಆಜ್ಞೆ ತಪ್ಪದೆಂದು ನುಡಿದಳು ೪೪

ಮರೆದು ಮಾತನಾಡಲು ಆ ಬಗೆಯು ತಿಳಿಯದು
ಜಗದ ಆಧಾರ ಕೃಷ್ಣ ಬಲ್ಲನೆಂದಳು ೪೫

ಕುಂತಿ ಮುಖದ ವಾಕ್ಯವು ಮಂತ್ರ ಪ್ರಯೋಗವು
ಸಂತೋಷ ಉಂಟು ನಮಗೆ ಸಂಪತ್ತು ಎಂದರು ೪೬

ನಮ್ಮಮ್ಮನಾಡಿದ ಮಾತು ಅನ್ಯಥಾ ಆಗದು
[ಕನ್ಯೆ] ನಮ್ಮೈವರಿಗೆ ಸಲುವುದೆಂದರು ೪೭

ಆಗ ಧೃಷ್ಟದ್ಯುಮ್ನನು ಅವರಾಡಿದ ಮಾತುಗಳನು
ಬಾಗಿಲ ಮರೆಗೆ ನಿಂತು ಕೇಳುತ್ತಿದ್ದನು ೪೮

ಆಗ ಧೃಷ್ಟದ್ಯುಮ್ನನು ಅವರಾಡಿದ ಮಾತು ಕೇಳಿ
ಬ್ರಾಹ್ಮಣರು ಅಲ್ಲ ಅವರು ಕ್ಷತ್ರಿಯರೆಂದನು ೪೯

ಹೋಗಿ ಧೃಷ್ಟದ್ಯುಮ್ನನು ತಾಯ ಕೂಡ ಹೇಳುತ
ಬ್ರಾಹ್ಮಣರು ಅಲ್ಲ ಅವರು ಕ್ಷತ್ರಿಯರೆಂದನು ೫೦

ಅತಿ ಮಾತನೇ ಕೇಳಿ ಕ್ಷತ್ರಿಯರೆಂದರಿತು
ಮತ್ತೆ ತಮ್ಮಪ್ಪಗೆ ಹೋಗಿ ಹೇಳಿದ ೫೧

ಕಂದನ ಮಾತು ಕೇಳಿ ಸಂಭ್ರಮದಿಂದಲಿ
ಅತಿಯಿಂದ ರಾಯನವರ ಕರೆಯ ಕಳುಹಿದ ೫೨

ಕಂದನ ಕಳುಹಿಸಿ ಅಂದಣ ಶೃಂಗರಿಸಿ
ಅತಿಯಿಂದ ರಾಯನವರ ಕರೆಯ ಕಳುಹಿದ ೫೩

ಹರುಷದಿಂದ ದ್ರುಪದರಾಯ ಅಂದಣ ಶೃಂಗರಿಸಿ
ಥಂಡ ಥಂಡದಲಿ ಪಾಂಡವರ ಕರೆಯ ಕಳುಹಿದ ೫೪

ಅರಸು ಮಕ್ಕಳು ತಾವು ಅರಿಸಿನದ ಹೊದಿಕೆ ಹೊದ್ದು
ಸರಸಿಜಾಕ್ಷನ ಕೂಡ ಲಗ್ನಕೆ ಬಂದರು ೫೫

ಪಂಚ ಪಾಂಡವರು ತಾವು ಪಂಥ ಪರಾಕ್ರಮಗಳಿಂದ
ಕುಂತಿದೇವಿಯು ಕೂಡ ಲಗ್ನಕೆ ಬಂದರು ೫೬

ಧೌಮ್ಯಾಚಾರ್ಯರ ಒಡಗೊಂಡು ಬಂದರು ಪಾಂಡವರು
ಏಕಚಕ್ರನಗರ ಬಿಟ್ಟು ಮುಂದೆ ನಡೆದರು ೫೭

ದ್ರುಪದರಾಯ ಮಾಡಿಸಿದ ಗುಪಿತವುಳ್ಳ ಅರಮನೆಯು
ಪುತ್ರಿ ಸಂಬಂಧ ಮಾಡಿ ಕೊಟ್ಟನವರಿಗೆ ೫೮

ಅರ್ಜುನ ಹೊಕ್ಕನು ಆಯುಧವುಳ್ಳ ಅರಮನೆಯು
ಸಜ್ಜನರು ಕಂಡು ಸಂತೋಷಬಟ್ಟರು ೫೯

ಅಳಿಯರನ್ನು ನೋಡುತ ಮನದೊಳಗೆ ಹಿಗ್ಗುತ
ಕರೆದು ತನ್ನ ಹೆಂಡತಿಯು ತೋರಿಸಿದನು ೬೦

ಗಂಡನ ಮಾತು ಕೇಳಿ ಸಂಭ್ರಮದಿಂದಲಿ
ಗಿಂಡಿಲಿ ಉದಕ ಹರಿವಾಣ ತಂದಳು ೬೧

ತಂದು ಗದ್ದಿಗೆಯನಿಳಿಯೆ ಬಂಗಾರದ್ದರಿವಾಣದಲಿ
ಬನ್ನಿರಿ ಪಾದಗಳನು ತೊಳೆವೆನೆಂದರು ೬೨

ಪಾಂಚಾಲರಾಯನು ಪಾದ ತೊಳೆವ ಸಮಯದಲ್ಲಿ
ಪಂಚಪಾದಯುಗಳ ಕಂಡು ಚಂಚಲಿಸಿದ ೬೩

ಒಬ್ಬ ಪುರುಷನಿಗೆ ಐವರು ಸ್ತ್ರೀಯರೆಂಬರು
ಒಬ್ಬಸ್ತ್ರೀಗೆ ಐವರು ಪುರುಷರೆ ಎಂದ ೬೪

ಯಾವ ದೇಶದವರೆಂದು ರಾಯ ಪ್ರಶ್ನೆ ಮಾಡುತಿರಲು
ವಿವರಿಸಿದ ಧರ್ಮರಾಯನ ಕೇಳುತಿದ್ದರು ೬೫

ಯಾವ ದೇಶದವರೆಂದು ಈಗ ಪ್ರಶ್ನೆ ಮಾಡುವಿರಿ
ಮತ್ಸ್ಯ ಹೊಡೆದು ದ್ರೌಪದಿಯು ಗೆದ್ದ ಫಲ್ಗುಣ ೬೬

ಸಂಕೋಚಬಟ್ಟುಕೊಳ್ಳೆ ಕಂತುಪಿತ ಸ್ವಾಮಿ ಬಂದು
ವಂಚನೆಯು ತೊರೆಸಿ ಧಾರೆ ಎರೆಸಿ ಕೊಟ್ಟನು ೬೭

ಭೂಸುರರ ಸಭೆಯೊಳಗೆ ವ್ಯಾಸಮುನಿರಾಯ ಬರಲು
ಕ್ಲೇಶನಾಶದಿಂದ [ಸಂತೋಷ ಒದಗಿತು] ೭೮

ವೇದವ್ಯಾಸರು ಬಂದದ್ದು ಭಾರತಿದೇವಿ ಕೇಳಿ
ಸಾಷ್ಟಾಂಗವೆರಗಿ ಕೈಮುಗಿದು ನಿಂತಳು ೭೯

ಭಾರತಿದೇವಿ ನಿನ್ನ ಮೂಲರೂಪವನ್ನು ತೋರೆ
ರಾಯರ ಸಂಶಯ ಪರಿಹಾರವಾಗಲಿ ೭೦

ವೇದವ್ಯಾಸರೆಂದದ್ದು ಭಾರತಿದೇವಿ ಕೇಳಿ
ಸಾಷ್ಟಾಂಗವೆರಗಿ ಪಂಚದ್ರೌಪದಿಯು ಆದಳು ೭೧

ಪಾಂಚಾಲರಾಯ ತನ್ನ ಮನದ ಹರುಷದಿಂದಲಿ
ಪಂಚನೆಯ ತೊರೆದು ಧಾರೆ ಎರೆದು ಕೊಟ್ಟನು ೭೨

ಮುತ್ತಿನ ಗಿಂಡಿಯೊಳಗೆ ಭಾಗೀರಥಿ ಉದಕ ತುಂಬಿ
ಧರ್ಮರಾಯಗೆ ಶ್ಯಾಮಲೆಯ ಧಾರೆ ಎರೆದು ಕೊಟ್ಟನು ೭೩

ರತ್ನದ ಗಿಂಡಿಯೊಳಗೆ ನರ್ಮದೆಯ ಉದಕ ತುಂಬಿ
ಭೀಮಸೇನಗೆ ಭಾರತಿಯ ಧಾರೆ ಎರೆದು ಕೊಟ್ಟನು ೭೪

ವಜ್ರದ ಗಿಂಡಿಯೊಳಗೆ ಗೋದಾವರಿ ಉದಕ ತುಂಬಿ
ಅರ್ಜುನಗೆ ಶಚಿಯ ಧಾರೆ ಎರೆದು ಕೊಟ್ಟನು ೭೫

ಮಾಣಿಕದ ಗಿಂಡಿಯೊಳಗೆ ಕೃಷ್ಣವೇಣಿ ಉದಕ ತುಂಬಿ
ನಕುಲಗೆ ಉಷೆಯ ಧಾರೆ ಎರೆದು ಕೊಟ್ಟನು ೭೬

ಚಿನ್ನದ ಗಿಂಡಿಯೊಳಗೆ ತುಂಗಭದ್ರೆ ಉದಕ ತುಂಬಿ
[ಸಹದೇವಗೂ ಉಷೆಯ] ಧಾರೆ ಎರೆದು ಕೊಟ್ಟನು ೭೭

ಮುತ್ತಿನ ಕರಿಮಣಿ ಧರ್ಮರಾಯ ಕರದಿ ಪಿಡಿದು
ಶ್ಯಾಮಲೆಯ ಕೊರಳಿಗ್ಹರಸಿ ಕಟ್ಟುತಿದ್ದನು ೭೮

ರತ್ನದ ಕರಿಮಣಿ ಭೀಮ ತಾ ಕರದಿ ಪಿಡಿದು
ಭಾರತಿಯ ಕೊರಳಿಗ್ಹರಸಿ ಕಟ್ಟುತಿದ್ದನು ೭೯

ವಜ್ರದ ಕರಿಮಣಿ ಅರ್ಜುನ ಕರದಿ ಪಿಡಿದು
ಶಚೀದೇವೀಯು ಕೊರಳಿಗ್ಗರಸಿ ಕಟ್ಟುತಿದ್ದನು ೮೦

ಮಾಣಿಕದ ಕರಿಮಣಿ ನಕುಲ ತಾ ಕರದಿ ಪಿಡಿದು
ಉಷಾದೇವಿಯು ಕೊರಳಿಗ್ಗರಸಿ ಕಟ್ಟುತಿದ್ದನು ೮೧

ಚಿನ್ನದ ಕರಿಮಣಿ ಸಹದೇವ ಕರದಿ ಪಿಡಿದು
ಉಷಾದೇವಿಯು ಕೊರಳಿಗ್ಗರಸಿ ಕಟ್ಟುತಿದ್ದನು ೮೨

ನಾಲ್ಕು ದಿನದ ಉತ್ಸವ ನಾಗೋಲಿಯು ಮಾಡೆ
ದೇವತೆಗಳು ಪುಷ್ಪದ ಮಳೆಯು ಕರೆದರು ೮೩

ದ್ವಾರಕೆಯು ಅರಸು ಮುರಾರಿ ಕೃಷ್ಣರಾಯನು
ಪಂಚಪಾಂಡವರಿಗೆ ಉಡುಗೊರೆಯು ಕೊಟ್ಟನು ೮೪

ಆವು ಅಕ್ಷೋಹಿಣಿ ಕೊಟ್ಟ ಆವು ಹಿಂಡನೆ ಕೊಟ್ಟ
ಪಂಚ ಪಾಂಡವರಿಗೆ ಉಡುಗೊರೆಯು ಕೊಟ್ಟನು ೮೫

ಹತ್ತು ಅಕ್ಷೋಹಿಣಿ ಕೊಟ್ಟ ಹತ್ತುವ ತೇಜಿ ಕೊಟ್ಟ
ಮಿತ್ರೆ ಕುಂತೆಮ್ಮಗೆ ಉಡುಗೊರೆಯು ಕೊಟ್ಟನು ೮೬

ಮುತ್ತಿನ [ಗೊಂಬೆಯನು] ಮಿತ್ರೆ ದ್ರೌಪದಿಗೆ ಕೊಡಲು
ಹಸ್ತಿನಾವತಿಯು ಪಟ್ಟಣಕೆ ಬಂದರು ೮೭

ಹವಳದ ಗೊಂಬೆಯನ್ನು ಹರದಿ ದ್ರೌಪದಿ ಪಿಡಿದು
ಹಸ್ತಿನಾವತಿಯು ಪಟ್ಟಣಕೆ ಬಂದಳು ೮೮

ಅಂದೆ ಗಾಂಧಾರಿ ತನ್ನ ಮನದೊಳಗೆ ಕಳವಳಿಸಿ
ಬಂದಿತು ಕಂಡಗಳಿಗೆ ಮೃತ್ಯು ಎಂದಳು ೮೯

ಧರ್ಮವೇ ಮುಖ್ಯವೆಂದು [ಧರ್ಮದಿಂದ] ರಾಜ್ಯವಾಳಿದ
ಧರ್ಮರಾಯು ತಾನೆ ಯಜಮಾನನಾದನು ೯೦

ವ್ಯಾಸವಾಕ್ಯದಿಂದ ಧರ್ಮ ರಾಜ್ಯವಾಳುತಿರಲು
ವ್ಯಾಸರಾಜ್ಞೆಯಿಂದ ಜಗವ ಪಾಲಿಸುತಿದ್ದನು ೯೧

ರಾಜಪೀಠಕ್ಕೆ ಧರ್ಮರಾಜ ತಾ ಏರಿದನು
ರಾಜಿಸುತ ನಕುಲ ಸಹದೇವರಿದ್ದರು ೯೨

ಭೀಮ ಸಲಹುತಿರಲು ವಿಭೀತರಾಗಿ ಜನರು ಎಲ್ಲ
ಕಾಮಪೂರ್ಣನಾದರೇಕಾಂತ ಭಕ್ತರು ೯೩

ಯಮಲೋಕದಲ್ಲಿ ಪಿತನು ಮುನಿಯು ಕಂಡು ಹೇಳಿದ
ಪಾಂಡುರಾಯಗೆ ಸ್ವರ್ಗವು ಇಲ್ಲ ಎನುತಲಿ ೯೪

ನಾರದ ಮುನಿಯು ಬಂದು ಒಂದು ಮಾತು ಹೇಳಿದ
ಧರ್ಮರಾಯ ರಾಜಸೂಯ ಯಾಗ ಮಾಡು ಎನುತಲ ೯೫

ಐವರೊಂದಾಗಿ ಕೂಡಿ ಆಲೋಚನೆ ಮಾಡಿದರು
ಕೃಷ್ಣನ ಕರೆಯ ಕಳುಹಬೇಕು ಎನುತಲಿ ೯೬

ಕೃಷ್ಣನ ಕರೆಯ ಕಳುಹಿ ಆಲೋಚನೆ ಮಾಡಿದರು
ಧರ್ಮರಾಯ ರಾಜಸೂಯ ಯಾಗ ಮಾಡು ಎನುತಲಿ ೯೭

ರಾಜಶತ್ರುವಾದ ಜರಾಸಂಧನ ವಧೆಮಾಡಿ
ರಾಜಸೂಯ ಯಾಗದಿ ಕೃಷ್ಣನ ಪೂಜಿಸಿದರು ೯೮

ಆಗ ದುರ್ಯೋಧನನ ಬೇಗದಿಂದ ಕರೆಯ ಕಳುಹಿ
ಏನು ಕೆಲಸ ಮಾಡುವಿರಿ ಭಾವ ಎಂದಳು ೯೯

ಬ್ರಾಹ್ಮಣರಿಗೆ ದಕ್ಷಿಣೆಯ ಬೇಡಿದಷ್ಟು ಕೊಡುವೆನೆಂದ
ಕೃಷ್ಣ ವಿನೋದದಿಂದ ಕೈ ಹೊಡೆದು ನಕ್ಕನು ೧೦೦

ಮೃಷ್ಟಾನ್ನ ಭಕ್ಷ್ಯ ಭೋಜ್ಯ ವಿಪ್ರರು ಬ್ರಾಹ್ಮಣರುಂಡು
ಸತ್ಯಧರ್ಮರಾಯನ ಹೊಗಳುತಿದ್ದರು ೧೦೧

ಹಾಲು ತುಪ್ಪ ಕೆನೆ ಮೊಸರು ವಿಪ್ರರು ಬ್ರಾಹ್ಮಣರುಂಡು
ಮತ್ತೆ ಧರ್ಮರಾಯನ ಹೊಗಳುತಿದ್ದರು ೧೦೨

ದಕ್ಷಿಣೆಯ ಕೊಟ್ಟು ಕೊಟ್ಟು ರಟ್ಟೆ ಸೋತು ನಿಂತಿರಲು
ಮರಳಿ ತುಂಬಿತು ಧನವು ಮೊದಲಿನಂದದಿ ೧೦೩

ಕೊಟ್ಟು ಕೊಟ್ಟು ಕುರುರಾಯ ರಟ್ಟೆ ಸೋತು ನಿಂತಿರಲು
ಮರಳಿ ತುಂಬಿತು ಧನವು ಮೊದಲಿನಂದದಿ ೧೦೪

ಅವಭೃತಸ್ನಾನ ಮಾಡಿ ಹೊನ್ನು ದಾನ ಕೊಟ್ಟು
ಮಡದಿ ಮಕ್ಕಳು ಸಹಿತ ಮನೆಗೆ ಬಂದರು ೧೦೫

ಕಷ್ಟಪಟ್ಟೆ [ತಂಗಿ] ಎಂದು ಕೃಷ್ಣ ಕರೆದು [ಕೇಳಲು]
[ಕಷ್ಟ] ನಿಮ್ಮಿಂದ [ನಿವೃತವಾಯಿತೆಂದಳು] ೧೦೬

ಆದಿ ನೀಲದ ಗೋಡೆ ಗಾಜಿನ ನೆಲಗಟ್ಟು
ಧರ್ಮರಾಯನ ಸಭೆಯ ಶೃಂಗಾರ ಒಪ್ಪಿತು ೧೦೭

ಇಂದ್ರನೀಲದ ಗೋಡೆ ಚಂದದ ನೆಲಗಟ್ಟು
ಧರ್ಮರಾಯನ ಸಭೆಗೆ ಶೃಂಗಾರ ಒಪ್ಪಿತು ೧೦೮

[ಅಂಗಿಯನ್ನು] ಮೇಲಕೆತ್ತಿ ಬಂದನು [ಕುರುರಾಯ]
[ಕಂಗಳಿಲ್ಲವೋ] ಭಾವ [ಎಂದು ನುಡಿದಳು] ೧೦೯

[ಅರಿಯ ಸಭೆಯ ಕುರುರಾಯ ನಡುವೆ ಬಿದ್ದ ನೀರೊಳಗೆ]
ದೊಡ್ಡ ಧ್ವನಿಯ ಮಾಡಿ ಭೀಮ [ನಗುತಲಿದ್ದನು] ೧೧೦

ಸಿಟ್ಟಿನಿಂದ ಕುರುರಾಯ ಬಂದ ತನ್ನರಮನೆಗೆ
ತಂದೆಯ ಕೂಡ ಮಾತಾಡ ಕುಳಿತನು ೧೧೧

ಸಿಟ್ಟಿನಿಂದ ಕುರುರಾಯ ಬಂದ ತನ್ನರಮನೆಗೆ
ಧರ್ಮನ ಜೂಜನಾಡೆ ಹೇಳಿ ಕಳುಹಿದ ೧೧೨

ಮಯನೆಂಬವ ಸಭೆಯ ನಿರ್ಮಾಣ ಮಾಡಿ ಮಂಟಪದಿ
ವಿರಚಿತವಾದ ಜೂಜು ತಂದು ಇಳುಹಿದರು ೧೧೩

ಕಪಟ ಮಹಿಮನಿಂದ ನಿರ್ಮಿತವಾದ ಮಂಟಪದಲ್ಲಿ
ಅರ್ತಿಯಿಂದ ಬಂದು ಜೂಜಾಡ ಕುಳಿತರು ೧೧೪

ರಾಯ ರಾಯರೆಲ್ಲ ಕೂಡಿ ಹಾರ ಪದಕಗಳನೆ ಹಾಕಿ
ಅರ್ತಿಯಿಂದ ಬಂದು ಜೂಜಾಡ ಕುಳಿತರು ೧೧೫

ಶೌರ್ಯವೆಲ್ಲ ವಿಚಿತ್ರವೀರ್ಯ ಸುತರು ಕೇಳಿ ವಿಹಿತ
ಕಪಟದಿಂದ ಜೂಜು ಎಂಬ ಕಾರ್ಯ ಹೂಡಿದರು ೧೧೬

ಮತ್ತೆ ಸೋತರೆ ಕುರುರಾಯ ಹೋಗುವಿಯೊ ವನವಾಸಕೆಂದು
ಸುತ್ತ ಡಂಗರವ ಹೊಯ್ಸಿ ಆಡಕುಳಿತರು ೧೧೭

ಪಣವನೊಡ್ಡು ರಾಯ ಎಂದು ಶಕುನಿ ದಾಳವ ಹಾಕೆ
ಸೋಲು ನಿಮ್ಮದಾಯಿತೆಂದು ತೊಡೆಯ ಹೊಯ್ದು ನಕ್ಕರು

ಇದಿಗೊ ಗೆದ್ದೆವೆನ್ನುತ ಶಕುನಿ ದಾಳವ ಹಾಕೆ
ಬೊಕ್ಕಸ ಭಂಡಾರ ಪಣಕಿಟ್ಟು ಸೋತನು ೧೧೯

ಹಿರಿಯ ತಮ್ಮಂದಿರ ಸೋತ ಆನೆ ಕುದುರೆ ದಳವ ಸೋತ
ಛತ್ರಚಾಮರಗಳ ಪಣಕಿಟ್ಟು ಸೋತನು ೧೨೦

ಕಿರಿಯ ತಮ್ಮಂದಿರ ಸೋತ ಬಂಟರನ್ನೆಲ್ಲ ಸೋತ
ಮಡದಿ ದ್ರೌಪದಿಯ ಪಣಕಿಟ್ಟು ಸೋತನು ೧೨೧

ಕಪಟವಾಕ್ಯದಿಂದ ಶಕುನಿ ಖಳರ [ಶಪಥ]ಮಾಡಿ ಗೆಲಲು
ನಿಪುಣ ವನವಾಸವಾಯ್ತು ಪಾಂಡುತನಯರಿಗೆ ೧೨೨

ಈ ಪರಿಯ ಕೌರವನ ಪಾಪಿ ಹೃದಯವನ್ನು ಕಂಡು
ಪಾಂಡುಭೂಪಸುತರು ಮುದದಿ ವನಕೆ ನಡೆದರು ೧೨೩

ಸಕಲ ಮುನಿಗಳೊಡನೆ ನಿತ್ಯಸುಖವನುಂಬ ವರವಿಷ್ಣು
ಭಕ್ತರಿಗೆ ಎಂದೆಂದಿಗೂ [ಭಯವು ಇಲ್ಲವೊ] ೧೨೪

ಹನ್ನೆರಡು ವರುಷ ವನವಾಸವೆಂದಾಡಿದರು
ಒಂದು ವರುಷ ಅಜ್ಞಾತ ವಿರಾಟನಲ್ಲಿ ಕಳೆದರು ೧೨೫

ನೀಚ ಬುದ್ಧಿಯುಳ್ಳ ದುಷ್ಟ ಕೀಚಕನ ಸಂಹರಿಸಿ
ತಾವು ಸೌಖ್ಯದಿ ವಿರಾಟನಲ್ಲಿ ಕಳೆದರು ೧೨೬

ಕಳೆದು ಸಪ್ತದಿನಗಳೆರಡು ಗೋವುಗಳನು ಕಾಯ್ದು
ಬೆಳಕು ಮಾಡುತ ಅಖಿಳ ಜಗವ ಬೆಳಗುತಿದ್ದರು ೧೨೭

ಹಾರ ಮುಕುಟ ದಿವ್ಯ ಕೇಯೂರ ಕುಂಡಲಾಭರಣ
ಧಾರ್ತರಾಷ್ಟ್ರ ರಾಜ್ಯಭೂಮಿಪಾಲರಾದರು ೧೨೮

ಸೌರಮಾನದಿಂದ ದಿನವು ಸಂದುದಿಲ್ಲ ಎನುತಲಿ
ಕೌರವ ಹೇಳಿದನು ದ್ರೋಣ ಭೀಷ್ಮರಿಗೆ ೧೨೯

ಚಾಂದ್ರಮಾನದಿಂದ ದಿನವು ಸಂದು ಹೋಯಿತೆನುತಲಿ
ಹೋಗಿ ಕೃಷ್ಣ ಹೇಳಿದನು ಕೌರವೇಶಗೆ ೨೩೦

ಚಿನ್ನದುಂಗುರವನಿಟ್ಟು ಬಣ್ಣ ಶಾಲಿಯನೆ ಹೊದ್ದು
ಚೆನ್ನ ಕೃಷ್ಣ [ಹೋದನು ಮಧ್ಯವಾರ್ತೆಗೆ] ೧೩೧

ಐದು ಮಂದಿಗೆ ಐದು ಗ್ರಾಮಗಳ ಕೊಡಿರೆಂದು
ಹೋಗಿ ಕೃಷ್ಣ ಹೇಳಿದನು ಕೌರವೇಶಗೆ ೧೩೨

ಆದಿಯಲ್ಲಿ ಗಳಿಸಲಿಲ್ಲ ಸೂಜಿಗ್ಹೊಂದಿದಷ್ಟು ಭೂಮಿ
ನಾನು ಕೊಡುವುದಿಲ್ಲ ಎಂದು ನುಡಿದ ಕೌರವ ೧೩೩

ಆದಿಯಲ್ಲಿ ಗಳಿಸಲಿಲ್ಲ ಸೂಜಿಗ್ಹೊಂದಿದಷ್ಟು ಭೂಮಿ
ರಾಜತನಯರಾದರೆ ರಣರಂಗ ಮೆರೆಯಲಿ ೧೩೪

ಈ ಪರಿಯ ಕೌರವನ ಪಾಪಿಹೃದಯವನ್ನು ಕಂಡು
ಪಾಂಡುಭೂಪಸುತರು [ಮುದದಿ] ರಣಕೆ ನಡೆದರು ೧೩೫

ಕುರುಕ್ಷೇತ್ರಕ್ಕೆ ಹೋಗಿ ರಣಕಂಬ ಹೂಡಿದರು
ಕೌರವರಾಯನ ಯುದ್ಧಕ್ಕೆ ನಡೆದರು ೧೩೬

ಸಿಂಹನಾದದಿಂದ ವೈರಿಸಂಹರ ಮಾಡಿ ನಾರ-
ಸಿಂಹಗರ್ಜಿಸಿದ ಭೀಮಸೇನರಾಯನು ೧೩೭

ಗಾಂಧಾರಿ ಸುತರ ಹೃದಯ ಗದೆಯಿಂದ ಸೀಳಿದನು
ಪರಶುರಾಮಗಾಹುತಿಯ ಕೊಡುತಲಿದ್ದನು ೧೩೮

ನೀರಡಿಸಿದ ಗದೆಗೆ ಗಾಂಧಾರಿ [ಸುತರ ರಕ್ತವನ್ನು]
ಪಾರಣೆಯ ಮಾಡಿಸಿದ ಪವನತನಯನು ೧೩೯

ಧರ್ಮದಿಂದ ಭೀಮಸೇನ ಧರ್ಮ ರಾಜ್ಯವಾಳುತಿರಲು
ಶರಣು ಭಜಿಸುತಿದ್ದರು ಕೃಷ್ಣನ ಭಕ್ತರು ೧೪೦

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಾಲಿ ಪಲ್ಲವಿ

---

# ಅವತಾರತ್ರಯ ಸುವ್ವಾಲಿ

## ೩. ಮಧ್ವ ಸುವ್ವಾಲಿ

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಾಲಿ ಪಲ್ಲವಿ

ಹೋಗಿ ಸುರರು ಮೊರೆಯಿಡಲು ದೇವ ಚಿತ್ತದಲ್ಲಿ ಇಟ್ಟು
ವಾಯುದೇವರಿಗೆ ಅಪ್ಪಣೆಯ ಮಾಡಿದ ೧

ಜ್ಞಾನ ಕಲಿ ಕಾಲದಲ್ಲಿ ಶೂನ್ಯವಾಗಿ ಹೋಗುತಿರಲು
ಶ್ರೀರಮಣನಾಜ್ಞೆಯಿಂದ [ವಾಯು] ಮಧ್ವರಾದರು ೨

[ಅಚ್ಯುತನ ಪಾದಧ್ಯಾನ] ತಮ್ಮ ಹೃದಯದಲ್ಲಿ ಇಟ್ಟು
ತಮ್ಮ ಕೀರ್ತಿ ಮೂರು ಲೋಕದಲ್ಲಿ ಇಟ್ಟರು ೩

[ಅಸುರ ಹೃದಯದಲ್ಲಿ ಸಂತಾಪವನ್ನು ಇಟ್ಟರು]
ಸುರ [ಮುನೀಶ್ವರರಲ್ಲಿ] ಸುಖವನಿಟ್ಟರು ೪

ಗರುಡಗಂಬದ ಮೇಲೆ ಒಬ್ಬ ಮರುಳ ಪುರುಷ ಕುಣಿದು ಕುಣಿದು
ಸರುವಜ್ಞರು ಜನಿಸುತ್ತಾರೆನುತ [ನುಡಿದನು] ೫

ಉರ್ವಿಯ ಮೇಲೆ ಇದ್ದ ಶುದ್ಧ ಸಾಧುಜನರಿಗೆ
ಬುದ್ಧಿ ಪ್ರಕಾಶವನ್ನು ಮಾಡಿ ಕೊಡುವರು ೬

ಭೂಮಿಯ ಮೇಲೆ ಇದ್ದ ಸಾಧು ಸಜ್ಜನರಿಗೆ
ಜ್ಞಾನಪ್ರಕಾಶವನ್ನು ಮಾಡಿ ಕೊಡುವರು ೭

ಮಧ್ಯಗೇಹಭಟ್ಟರು ತಪ ಮಾಡುತಿರಲು [ವಾಸುದೇವ]
ಉದ್ಧರಿಪ ಮಗನ ಕೊಟ್ಟ ಮಧ್ವರಾಯರ ೮

ನಾಲ್ಕು ತಿಂಗಳಾಗಿರಲು ಆ ಶಿಶುವನೆತ್ತಿಕೊಂಡು
[ನಡೆದು] ಬಂದರು ಅನಂತಶಯನಕೆ ೯

[ತಾಯಿಯು ಕೊಡಿಕೊಂಡು ದೇವರಿಗೆ ವಂದಿಸೆ
ನಡೆದು] ಬಂದರು ಅನಂತಶಯನಕೆ ೧೦

ಇಂದಿರೇಶನ ಪಾದ ನೆನೆದು ಆನಂದಭರಿತರಾದರು
ವಂದನೆಯು ಮಾಡಿ ಕೈಯ ಮುಗಿದು ನಿಂತರು ೧೧

ಮಗನ ಹರಕೆ ಒಪ್ಪಿಸಿ ಮನೆಗೆ ಬರುವ ಕಾಲದಲ್ಲಿ
ಒಡೆದು ಬ್ರಹ್ಮಶಿಶುವಿನ ಮಹಿಮೆ ಹೇಳಿತು ೧೨

ಕುಲದೇವತೆಯ ಕಂಡು ತಿರುಗಿ ಬರುವ ವೇಳ್ಯದಲ್ಲಿ
ಒಡೆದು ಬ್ರಹ್ಮಶಿಶುವಿನ ಮಹಿಮೆ ಹೇಳಿತು ೧೩

[ಹೊರಗೆ ಮಗನ ಬಿಟ್ಟು ತಾಯಿ ಮನೆಯ ಕೆಲಸಕ್ಹೋದಳು]
ತಡೆದಳೆಂದು ಬಿಕ್ಕಿ ಬಿಕ್ಕಿ [ಅಳುತಲಿದ್ದಿತು] ೧೪

[ಎತ್ತಿಕೊಂಡರೊಲ್ಲದು ಬಿಕ್ಕಿ ಬಿಕ್ಕಿ ಅಳುತಲಿರಲು
ಕುಚ್ಚಿದ] ಹುರುಳಿಯನ್ನು ತಿನಿಸುತಿದ್ದಳು ೧೫

[ಎತ್ತಿಗಿಟ್ಟ] ಹುರುಳಿಯನ್ನು ಚಿಕ್ಕವಗೆ [ತಿನಿಸುವರೆ]
ಸಿಟ್ಟಿನಿಂದ ಮಗಳನು ಜಬರಿಸಿಕೊಂಡಳು ೧೬

[ಮರಳುತಿರಲು ಕೇಲಿಯೊಳಗೆ] ಹುರುಳಿ ತಿನಲು [ಮಧ್ವರು
ಹರಿಯೆ]ಮಗನ ರಕ್ಷಿಸೆಂದು ಬೇಡಿಕೊಂಡರು ೧೭

ಅರುಣ ಉದಯದಲ್ಲಿ ಎದ್ದು ಗೂಳಿಯ ಬಾಲ ಹಿಡಿದು
ಅರಣ್ಯದ ಒಳಗೆ ಸಂಚಾರ ಮಾಡಿದರು ೧೮

[ಋಣದ ಪಿತನ ಬೇಡಿ ಬರಲು ಹುಣಿಸೆ ಬೀಜ ಆಡುತಿರಲು
ಎಣಿಸಿ ಕೊಡಲು] ಮುಕ್ತಿ ಹೇತು [ಆಯಿತಾತಗೆ] ೧೯

ತವರು ಮನೆಯು [ಒಳಗೆ ಮದುವೆ ಸಂಭ್ರಮ ಆಗುತಿರಲು]
ಮಗನ ಮೇಲಿನ ಹಂಬಲವ ಮರೆತು ಬಿಟ್ಟಳು ೨೦

ಎರಡು ವರ್ಷವಾಗಲು ಶಿಶುವು ತೊದಲು ನುಡಿಯುತ
ನಡೆದು ಬಂದಿತು ಅನಂತಶಯನಕೆ ೨೧

[ಎಲ್ಲಿಗೆ ಪಯಣವೆಂದು ಎಲ್ಲ ಜನರು ಕೇಳಲು]
ನಮ್ಮ ಸ್ವಾಮಿ ದರುಶನಕೆ ಬಂದೆನೆಂದರು ೨೨

[ಚಿಕ್ಕವನ] ಕಾಣದೆ ದಿಕ್ಕು ದಿಕ್ಕು ಹುಡುಕುತ
[ಚಚ್ಚರದಿ ಬಂದರು] ಅನಂತಶಯನಕೆ ೨೩

ಬಾಲಕನ ಕಾಣದೆ [ಕೇರಿ ಕೇರಿ] ಹುಡುಕುತ
[ಬೇಗದಿಂದ ಬಂದರು] ಅನಂತಶಯನಕೆ ೨೪

ಚಿಕ್ಕವನ ಎತ್ತಿಕೊಂಡು ಬಾಹೋದನ್ನು ಕಂಡರು
ಬಿಟ್ಟನಿಧಿ ಎನ್ನಕೈಗೆ ಸಿಕ್ಕಿತೆಂದರು ೨೫

ಬಾಲಕನ ಎತ್ತಿಕೊಂಡು ಬಾಹೋದನ್ನು ಕಂಡರು
ಹೋದ ನಿಧಿ ಎನ್ನಕೈಗೆ [ಸೇರಿತೆಂದರು] ೨೬

ಮಧ್ಯಗೇಹಭಟ್ಟರು ಮಗನ ಕಂಡು ಅಪ್ಪಿಕೊಂಡು
ಉದ್ಧರಿಸೊ ಸ್ವಾಮಿ ಎಂದು ಬೇಡಿಕೊಂಡರು ೨೭

ಶಿವಭಟ್ಟನ ಪುರಾಣ ಶಿಶುವು ಕೇಳಿ ದೂಷಿಸಿ
ಸಕಲ ಜನರ [ಮನಸಿಗ್ಗರುಷ ಮಾಡಿಕೊಟ್ಟರು] ೨೮

ಬಾಲಕರ ಕೂಡಿಕೊಂಡು [ವನದೊಳಗೆ ಆಡುತಿರಲು]
ಕಾಲದಲ್ಲಿ ಮೌಂಜಿ ಆಯ್ತು ಕಮಲನಯನಗೆ ೨೯

ಉಪನಿಷತ್ತು [ಶಾಸ್ತ್ರ ಓದಿ ವನದೊಳಗೆ ಇರುತಿರಲು]
ಕಿವಿಯ ಊದಿ ತಲೆಯ ಬೇನೆ ಬಿಡಿಸಿದ ಗುರುವಿಗೆ ೩೦

ಸಾಧನಿದ್ವಾದಶಿ ಬರಲು ನೀರಿಲ್ಲದೆ ಮಿಡುಕುತಿರಲು
ಬೇಗದಿಂದ ಸರೋವರ ನಿರ್ಮಾಣ ಮಾಡಿದರು ೩೧

[ಆಲದ] ವೃಕ್ಷ ತಂದು ತಲೆಕೆಳಗೆ ಮಾಡಿ [ಬಿತ್ತಿ]
ಕೊನೆಯ ಕೊಂಬಿನಿಂದ ಫಲ ಪುಷ್ಪವಾಯಿತು ೩೨

ಮಣಿಮಂತನೆಂಬ ದೈತ್ಯ [ನ್ಮೈಗೆ ಸುತ್ತಿ ಬರುತಿರಲು]
ಎಡದ ಪಾದದಲ್ಲಿ ಅವನ ಒರೆಸಿ ಬಿಟ್ಟರು ೩೩

ಬಾಲಕರ ಕೂಡಿಕೊಂಡು ವಿಮಾನಗಿರಿಯಲಾಡುತಿರಲು
ಬಾರೊ ವಾಸುದೇವ ಎಂದು ಮಗನ ಕರೆದಳು ೩೪

ತಾಯಿ ಕರೆದಳೆಂದು ವಿಮಾನಗಿರಿಯ [ಧುಮುಕಿದರು]
ಪಾದ ಊರಿ [ಜಗವ] ಪಾವನವ ಮಾಡಿದರು ೩೫

[ಯೋಗಪಟ್ಟ] ಧರಿಸಿದ [ಜಡೆಗಳ ಮಸ್ತಕವು
ಬೇಗದಿಂದ] ಸನ್ಯಾಸಿ ಆಗುವೆನೆಂದರು ೩೬

ವರುಷ ನೋಡು ಬಾಲ ನೀನು [ಬಯಸಬೇಡ] ಸನ್ಯಾಸ
ಬಹಳ ತಪಸ್ಸಿನಿಂದ ನಿನ್ನ ಪಡೆದೆನೆಂದಳು ೩೭

ಹಾಲು [ಅನ್ನವನ್ನು ಉಂಡು] ಬಹಳ ಕಷ್ಟಪಟ್ಟು ಪಡೆದೆ
ಬಾಲ ನಿನಗೆ ಸನ್ಯಾಸ ಬೇಡವೆಂದಳು ೩೮

[ಹನ್ನೆರಡು] ಸಾವಿರ ವರುಷ [ಚೆನ್ನಾಗಿ] ತಪ ಮಾಡಿ
[ಬಾಲ ನಿನಗೆ] ಸನ್ಯಾಸ ಬೇಡವೆಂದಳು ೩೯

[ಭಿಕ್ಷದನ್ನವನ್ನೆ ಉಂಬ] ಅಪೇಕ್ಷೆಯುಳ್ಳ ಮಗನ [ಪಡೆದೆ]
ರಕ್ಷಣೆಯ ಮಾಡುವರ ಕಾಣೆನೆಂದಳು ೪೦

ವಿಷ್ಣು ತೀರ್ಥರೆಂಬ ಮಗನ ಕೊಟ್ಟು ತಾಯ [ಸಂತೈಸಿ]
ಅಪ್ಪಣೆಯ ಕೊಂಡು ಆಶ್ರಮಕೆ ಬಂದರು ೪೧

ಉಟ್ಟ ಧೋತ್ರವನ್ನು ಬಿಚ್ಚಿ [ಕೌಪೀನ ಕಟ್ಟಿಕೊಂಡು]
ಆನಂದತೀರ್ಥರೆಂಬ ಸನ್ಯಾಸಿ ಆದರು ೪೨

[ಮೂಲ] ಗುರುವು ನೋಡಿರೊ [ಹಳೆ ವಲ್ಲಿ ಒದ್ದವರ]
ಸುರಮುನೀಶ್ವರರು [ಕಂಡು ಹರುಷ] ಬಟ್ಟರು ೪೩

ಪಾಪಿ ಅಲ್ಲ ಕೋಪಿ ಅಲ್ಲ ಪಾಪಿ ಬೊಮ್ಮನೂ ಅಲ್ಲ
ಪಾಪಿ ಮಾಯಾವಾದಿ ಮತವ ಮುರಿದು [ಬಿಟ್ಟರು] ೪೪

ಜ್ಞಾನಬೋಧ ಎಂಬವನ ದೂರಕ್ಕೆ ಓಡಿಸಿ ಶ್ರೀ
ಮನ್ನಾರಾಯಣನೆ ಪರದೇವತೆ [ಎಂದು] ನುಡಿದರು ೪೫

ಮಾಯಾವಾದಿಗಳೆಲ್ಲ ವಾದಮಾಡುವೆವೆನುತ ಬರಲು
ಕಾಣಸಿಕೊಳ್ಳದ್ಹಾಂಗೆ ಓಡಿ ಹೋದರು ೪೬

ಕೇರಳ ದೇಶಕ್ಕೆ ಹೋಗಿ ಮಧ್ವರಾಯರು
ಮಾಯಾವಾದಿಗಳ ಕಾಲು ಸೆಳೆದು ಬಿಟ್ಟರು ೪೭

[ಭಕ್ತಜನರ] ಮನೆಯೊಳು ಲೆಕ್ಕವಿಲ್ಲದ ಹಣ್ಣುಮೆದ್ದು
[ಅಕ್ಷಯವಾಗಲೆಂದು ಅವರಿಗೆ ಮೋಕ್ಷ ಕೊಟ್ಟರು] ೪೮

ದಂಡ ಪೊತ್ತ ಶಂಕರನ ಕೋಲು ಮುರಿದು [ಬಿಸುಡೆಂದು]
ಭಂಗಪಡಿಸಿ ಮುಂದೆ ಹಿಡಿದು ನಿಲ್ಲಿಸಿದರು ೪೯

ಗುರುಗಳ ಮನಸಿನ [ವ್ಯಾಕುಲಂಗಳ] ಕಳೆದು
ಗೀತಾ [ಭಾಷ್ಯವನ್ನು] ಮಾಡಿಕೊಟ್ಟರು ೫೦

ಮರಳಿ ಬದರಿಕಾಶ್ರಮಕೆ [ತೆರಳಿ] ಮಧ್ವರಾಯರು
ಪರ್ವತವ ಕಂಡು ಆಶ್ಚರ್ಯ ಪಟ್ಟರು ೫೧

ಪರ್ವತದ ಮಹಿಮೆಯನ್ನು ವರ್ಣಿಸಲಳವಲ್ಲ
ಗರುಡ ಶೇಷ [ರುದ್ರರಾರಿಂದಲಾದರೂ] ೫೨

ಭಕ್ತಿಭಾವದಿಂದ ಮಧ್ವರ ಬಗ್ಗಿ ಮುನಿಗಳೆಲ್ಲ ನೋಡಿ
[ಮುಕ್ತಿದಾತರಿಗೆರಗಿ ಸ್ತೋತ್ರ ಮಾಡುತಿದ್ದರು] ೫೩

[ಯೋಗಪಟ್ಟಿ] ಧರಿಸಿದ [ಜಡೆಗಳ] ಮಸ್ತಕವು
[ಯೋಗಿಗಳನು] ಕಂಡರು [ಮಧ್ವರಾಯರು] ೫೪

[ಸರಸಿಜಾಕ್ಷನ] ಹೊಳೆಯುವ ಹಸ್ತಮಸ್ತಕ ಮೈಯಬಣ್ಣ
[ಚರಣ ಕಮಲಲೋಚನದವರ ಕಂಡರು] ೫೫

ಇಂದಿರೇಶನ ಪಾದ ಕಂಡು ಆನಂದ ಭರಿತರಾಗಿ
ವಂದನೆಯ ಸ್ತೋತ್ರವ ಮಾಡುತಿದ್ದರು ೫೬

ಇಂದಿರೇಶ ಶ್ರೀಮದಾನಂದ[ತೀರ್ಥರಪ್ಪಿ ಕೊಂಡು]
ಚೆಂದದಿಂದ ಏಕಾಂತ ಆಡುತಿದ್ದರು ೫೭

ಈ ತೀರ್ಥಕ್ಕೆ ಸರಿಯಿಲ್ಲ ಈ ಕ್ಷೇತ್ರಕ್ಕೆ [ಸಮವಿಲ್ಲ]
[ಶಾಸ್ತ್ರ ಅರ್ಥದಿಂದ ನಿರ್ಣಯವ] ಮಾಡಿದರು ೫೮

ಗುರುಗಳಾಜ್ಞೆಯಿಂದ ಮಧ್ವರು ತೆರಳಿ ಭರತಖಂಡದಲ್ಲಿ
ನರರಿಗೆ ಹರಿಯ ಸ್ತೋತ್ರಗಳನು ಮಾಡಿದರು ೫೯

ಶೋಭನಭಟ್ಟರು ಶ್ರೀಮದಾಚಾರ್ಯರ
ಪಾದದ ಮೇಲೆಬಿದ್ದು ಶಿಷ್ಯರಾದರು ೬೦

ಶೋಭನ ಭಟ್ಟರು ಶ್ರೀಮದಾಚಾರ್ಯರ
ಪಾದತೊಳೆದು ಚಾಮರವ ಹಾಕುತಿದ್ದರು ೬೧

ಭರತಖಂಡವನೆಲ್ಲ ಚರಿಸಿ ಮಧ್ವರಾಯರು
ಉಡುಪಿ ಎಂಬ [ಕ್ಷೇತ್ರದಲ್ಲಿ ವಾಸ] ಮಾಡಿದರು ೬೨

ಅಚ್ಯುತಪ್ರೇಕ್ಷಾಚಾರ್ಯರ ಚಿತ್ತ [ನಿರ್ಮಲಗೊಳಿಸಿ]
ವಿಷ್ಣು ಸರ್ವೋತ್ತಮನೆಂಬ ಜ್ಞಾನ [ಮಾಡಿ] ಕೊಟ್ಟರು ೬೩

ಕಡಲ ಮಧ್ಯದಲ್ಲಿ ಒಂದು ಹಡಗು ಬಂದು ನಿಂತಿರಲು
ಕಂಡು ಮಧ್ವರಾಯರು ಕೈಯ ಬೀಸಿದರು ೬೪

[ಯೋಗದಿಂದ ದಡಕೆ ಬರಲು] ಶ್ರೀಮದಾಚಾರ್ಯರಿಗೆ
ಏನು [ಬೇಕಾದ್ದು ಬೇಡಿ] ಕೊಡುವೆ ಎಂದರು ೬೫

ಮುತ್ತು ಮಾಣಿಕ್ಯ ಏಕೆ ಚಿನ್ನ ಬೆಳ್ಳಿ ನಮಗೆ ಏಕೆ
ಬೇಡುವೆವು ಮೂರು [ಗೋಪೀ ಚಂದನ] ಎಂದರು ೬೬

[ಶ್ರೀಮದಾಚಾರ್ಯರಿಗೆ] ಬಹಳ ಸಂತೋಷದಿಂದ
ಮೂರು ಗೋಪೀ ಚಂದನದ ಗಡ್ಡೆ [ಕೊಟ್ಟರು] ೬೭

[ಒಂದೊಂದನು] ಹೆಗಲಲಿಟ್ಟು ಒಂದುಗಡ್ಡೆ ಶಿರದಲಿಟ್ಟು
ಚೆಂದದಿಂದ ದ್ವಾದಶಸ್ತೋತ್ರ ಹೇಳುತ ಬಂದರು ೧೮

[ಆಗಲೊಂದು ಗಡ್ಡೆ ಒಡೆಯೆ ರಾಮಮೂರುತಿ ಇರಲು]
ಮತ್ತೊಂದು ಗಡ್ಡೆ ಬಿದ್ದು ದುರ್ಗಿ ಜನಿಸಿ ಹೋದಳು ೧೯

ವಾರಿಧಿಯೊಳಗೆ ಇದ್ದ ದ್ವಾರಕೆಯ ಕೃಷ್ಣನ
ದ್ವಾದಶಸ್ತೋತ್ರ ಹೇಳುತ [ಕೊಂಡು] ಬಂದರು ೨೦

ರಜತಪೀಠ ಪುರದೊಳಗೆ ರಾಜಮಂದಿರವ ಮಾಡಿ
ರಮ್ಯಮೂರ್ತಿ ಕೃಷ್ಣನ [ಪ್ರತಿಷ್ಠಿಸಿದರು] ೨೧

ಕೃಷ್ಣ ವೇದವ್ಯಾಸರ ಮೂರ್ತಿಯ ಪ್ರತಿಷ್ಠೆ ಮಾಡಿ
ತ್ರಿಕಾಲದಲ್ಲಿ ಪೂಜೆ ಮಾಡುತಿದ್ದರು ೨೨

ಅಷ್ಟವರ್ಷದ ಬಾಲಕರಿಗೆ ಕೊಟ್ಟು ಸನ್ಯಾಸವನ್ನು
ಶ್ರೀಕೃಷ್ಣನ ಪೂಜೆ ಸಾಂಗ ಮಾಡಿಸಿದರು ೨೩

ಕೃಷ್ಣನ ಪ್ರತಿಮೆ [ಎರಡು] ವಿಠಲನ ಪ್ರತಿಮೆ [ಮೂರು]
ವರಹ ನೃಸಿಂಹ ರಾಮನ ಪ್ರತಿಮೆ ಕೊಟ್ಟರು ೨೪

ಎಂಟು ಮಠದವರಿಗೆ ಎಂಟು ಮೂರುತಿ ಕೊಟ್ಟು
ಸಂತತ [ಪೂಜೆ ಸಾಂಗ ಮಾಡಿಸಿದರು] ೨೫

ಎರಡು [ತಿಂಗಳಿಗೊಂದು] ಪರ್ಯಾಯವನ್ನು ಮಾಡಿ
ಸರಸಿಜಾಕ್ಷನ ಪೂಜೆ ಸಾಂಗ ಮಾಡಿಸಿದರು ೨೬

ಉರ್ವಿ ಮೇಲೆ ಉಳ್ಳ ಶುದ್ಧ ತೀರ್ಥಂಗಳ ತಂದು
ಮಧ್ವ ಸರೋವರವ ನಿರ್ಮಾಣ ಮಾಡಿದರು ೨೭

ಉಷಃ ಕಾಲದಲ್ಲಿ ಎದ್ದು ಶ್ರೀಕೃಷ್ಣನ ಪೂಜಿಸಿ
ಸಾಯಂಕಾಲದಲ್ಲಿ ಸುಬ್ರಹ್ಮಣ್ಯಕ್ಕೆ ಬಂದರು ೨೮

ಮಧ್ಯಾಹ್ನ ಕಾಲದಲ್ಲಿ [ಮಥ್ಯತಾಳ ಮಠಕೆ ಬಂದು]
ಮಧ್ವರಾಯರ [ಮಹಿಮೆ] ಮೂರು ಜಗವ ತುಂಬಿತು ೨೯

ಕೋಟಿ ಸೂರ್ಯರ [ಬೆಳಕು ಕಲಶಗೋಪುರದ] ಕಾಂತಿ
[ವಾಸುದೇವನ ಪಟ್ಟಣದೊಳು ಶೋಭಿಸುತಿದ್ದುವು] ೮೦

ಅಚ್ಯುತನ ಪಟ್ಟಣದೊಳು ಚಿತ್ರಭೂಸುರರು ಎಲ್ಲ
ಪರಿಪರಿ ಕ್ರೀಡೆಗಳ ಆಡುತಿದ್ದರು ೮೧

[ಈಶ್ವರ ಭೂಮಿಯು] ತೋಡು ಹೋಗು ಎಂದರೆ
ತೋರಿಸಿ ಕೊಟ್ಟರೆ ನಾ ತೋಡುವೆನೆಂದರು ೮೨

ತೋರಿಸಿ ಕೊಡುವೆನೆನುತ [ನೆಲಕೆ ಗುದ್ದಲಿ ಹಾಕೆ]
ತೋಡಿ ತೋಡಿದ್ಹಾಂಗೆ ನೆಟ್ಟನಾಗಿ [ಹೋದರು] ೮೩

ನಾವೆ ಇಲ್ಲದೆ ನದಿಯು ಹೇಗೆ ದಾಟಿದಿರಿ ಎಂದು
[ಕಾವ]ಲಿದ್ದ ದೂತರೆಲ್ಲ ಕೇಳುತಿದ್ದರು ೮೪

ಜಗವನೆಲ್ಲ ರಕ್ಷಿಸುವ [ಸ್ವಾಮಿ] ನಮ್ಮ ರಕ್ಷಿಸುವ
ಅವರಿಗೆ ತಕ್ಕ [ಮಾತನಾಡಿ] ಮುಂದೆ ನಡೆದರು ೮೫

ಕಾವಿಯ [ವಲ್ಲಿಯನ್ನು] ಗಂಟು ಕಟ್ಟಿ ಬಿಸುಡಲು
ತಮ್ಮ ತನ್ಮೊಳೆ [ಕಡಿದಾಡಿ] ಮಡಿದರೆಲ್ಲರು ೮೬

ಕಳ್ಳರೆಲ್ಲ ಅಟ್ಟಿ ಬರಲು ಕಲ್ಲಾಗಿ [ನಿಂತರು]
ಕಲ್ಲು ಎಂದು ಕಳ್ಳರೆಲ್ಲ [ಬಿಟ್ಟು] ಹೋದರು ೮೭

ಕತ್ತಲೊಳಗೆ [ನದಿಯು ದಾಟಿ]ವಸ್ತ್ರತೋಯದ್ಹಾಂಗೆ ಬರಲು
[ಮೆಚ್ಚಿ ದೊರೆಯು ದೂತರ ಕಳುಹಿ ಕೊಟ್ಟನು] ೮೮

[ಮುವತ್ತು] ಕೊಡದ ಹಾಲು [ಮೂರು ಸಾವಿರ] ಹಣ್ಣು ಮೆದ್ದು
[ಆತ್ಮದಲ್ಲಿ ಜೀರ್ಣವಾಯಿತು ಅನಿಲತನಯಗೆ] ೮೯

ಶ್ರೀಮದಾಚಾರ್ಯರ ವ್ಯಾಖ್ಯಾನ [ಕಾಲದಲ್ಲಿ]
ಆದಿಶೇಷ ತಾನು ಬಂದು ಕೇಳುತಿದ್ದನು ೯೦

ಮಾಯಾವಾದಿ ತಾರಕನ ಸೂರ್ಯ ಭೇದಿಸಲಾರನು
ಮಧ್ವರಾಯರೆಂಬ ಅಗ್ನಿ ಜಯಿಸಿ ಬಿಟ್ಟಿತು ೯೧

ಜಾಲಗಾರ ಮೀನವನ್ನು ಯಾವ ಪರಿಯಲಿಳಿವನು
ಮಧ್ವರಾಯರು ಹಾಗೆ [ಮುದ್ರಾಂಕನ] ಮಾಡಿದರು ೯೨

ಶ್ರೀಮದಾಚಾರ್ಯರ ದ್ವಾದಶ ನಾಮ [ಒಣಗಲು]
ಬೇಗ ಶಿಷ್ಯ ತುಳಸಿ ವನಮಾಲೆ ಹಾಕಿದ ೯೩

ರಾಜಸಿಂಹರಾಯನು ಶ್ರೀಮದಾಚಾರ್ಯರ
ಪಾದದ ಮೇಲೆ ಬಿದ್ದು ಶಿಷ್ಯನಾದನು ೯೪

[ತ್ರಿವಿಕ್ರಮ ಪಂಡಿತರು ಶ್ರೀಮದಾಚಾರ್ಯರ]
ಪಾದದ ಮೇಲೆ ಬಿದ್ದು ಶಿಷ್ಯರಾದರು ೯೫

ಶೋಭನ ಭಟ್ಟರು ಶ್ರೀಮದಾಚಾರ್ಯರಿಗೆ
ರಾಜಸಭೆಯೊಳಗೆ [ಪುಸ್ತಕ] ಕೊಡಿಸಿದರು ೯೬

ರಾಜಸಿಂಹರಾಯನು ಶ್ರೀಮದಾಚಾರ್ಯರಿಗೆ
ರಾಜಸಭೆಯೊಳಗೆ [ಪುಸ್ತಕ] ಕೊಟ್ಟನು ೯೭

ಶ್ರೀಮದಾಚಾರ್ಯರು [ಸ್ನಾನಕ್ಕೆ ಹೋಗಲು]
ಬೇಗ ಶಿಷ್ಯರೆಲ್ಲ ಸೇವೆ ಮಾಡುತಿದ್ದರು ೯೮

ಶ್ರೀಮದಾಚಾರ್ಯರು [ಸ್ನಾನಕ್ಕೆ ಹೋಗಲು]
[ಬೇಗ ಗಂಗೆ ಬಂದು ನೆಲೆಸಿ] ಪವಿತ್ರಳಾದಳು ೯೯

ದ್ವಾದಶಾದಿತ್ಯರು ಏಕಕಾಲಕುದಿಸಿದಂತೆ
ಶ್ರೀಮದಾಚಾರ್ಯರ ದ್ವಾದಶನಾಮ ಹೊಳೆದುವು ೧೦೦

ಅಂದು ಆ ದೇಶದಲ್ಲಿ ಅನಾವೃಷ್ಟಿ ಆಗಿರಲು
ದಂಡ ಕೋಲು ತಿರುಗಿಸಿ [ತೀರ್ಥ] ಮಾಡಿದರು ೧೦೧

ಸುತ್ತ [ಮುತ್ತ ಭೂಮಿಯನ್ನು ಒತ್ತಿ ಕಾಲುವೆ ತೆಗೆಸಿ]
ಬತ್ತ ಬೆಳೆಸುತಿದ್ದರೀ ವಿಚಿತ್ರಮಹಿಮರು ೧೦೨

ವ್ಯಾಖ್ಯಾನ ಕಾಲದಲ್ಲಿ ದೀಪ [ಶಾಂತವಾಗುತಿರಲು
ಜ್ಯೋತಿರ್ಮಯ]ಮಾಡಿದರು [ಅಂಗುಷ್ಠದಿಂದಲೆ] ೧೦೩

[ಗಂಡವಾಟೆ ಎಂಬುವನು ಗಳನ ಹಿಡಿದು ಒತ್ತಿ ಒತ್ತಿ]
ತುಂಡು ಮುಂಡಾಗಿ [ಭೂಮಿ] ಮೇಲೆ [ಬಿದ್ದನು] ೧೦೪

ಅಣು [ಮಹತ್ತುಗಳೆಲ್ಲ ನಿಮಿಷದೊಳಗೆ ಮಾಡಿಕೊಟ್ಟು]
ಹುಡುಗನ ಹೆಗಲೇರಿ ದೇವಾಲಯಕೆ ಬಂದರು ೧೦೫

ಪೂರುವ ಎಂಬುವನು ಶ್ರೀಮದಾಚಾರ್ಯರ
ಮೂಗಿನ ಮೇಲೆ ಬಿದ್ದು ಪತನವಾದನು ೧೦೬

[ಕೊಕ್ಕಡದೊಳಗೆ ಉಳ್ಳ ಮುಪ್ಪಿನ ಬ್ರಾಹ್ಮಣಗೆ
ಕೃಷ್ಣಾಮೃತ ಮಹಾರ್ಣವ ಹೇಳಿ ಕೊಟ್ಟರು] ೧೦೭

ಶ್ರೀಮದಾಚಾರ್ಯರಿದ್ದು ಅಷ್ಟಮಿ ಪರ್ಯಂತ
ಎರಡು ಮುಹೂರ್ತದೊಳೆ ಬದರಿಕಾಶ್ರಮಕೆ ಬಂದರು ೧೦೮

ಬದರಿಕಾಶ್ರಮಕೆ ಬಂದು ಬದರಿ ನಾರಾಯಣರ
ಪಾದದ ಮೇಲೆ ಬಿದ್ದು ಶಿಷ್ಯರಾದರು ೧೦೯

ವಾಯುದೇವರ ಮೂರವತಾರ [ಹೇಳಿ] ಕೇಳಿದವರಿಗೆ
ಸಾಯುಜ್ಯ [ಪದವಿ] ಕೊಡುವ ಹಯವದನನು ೧೧೦

ಸೋದೆ ಮಠದಲ್ಲಿ ಇದ್ದ [ವಾದಿರಾಜ] ಪಾಡಿದಂತೆ
ಹಯವದನನ ಪಾಡಿರಿ ವಿನೋದದಿಂದಲಿ ೧೧೧

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಾಲಿ ಪಲ್ಲವಿ



# ಲಘು ಟಿಪ್ಪಣಿಗಳು

## ಹನುಮ ಸುವ್ವಾಲಿ

ಪಲ್ಲವಿ] ಸುವ್ವಿಯ ಸೊಲ್ಲುಗಳಲ್ಲಿ ವಾಯು ಅವತಾರತ್ರಯ ಸೂಚಿಸಿ, ಸುವ್ವಿಗಳಆಲಿ=[ಸಾಲು] 'ಸುವ್ವಾಲಿ' ಎನಿಸಿದೆ; ಮೂರವತಾರಗಳ ಆದ್ಯಂತ ಪುನರಾವರ್ತಿತ. ಉತ್ಸಾಹ ಲಯದ ಛಂದಸ್ಸಿನಲ್ಲಿ ಭೋಗಷಟ್ಪದಿಯ ಸುಳುಹುಳ್ಳ ದ್ವಿಪದಿ ಇದು–

ಸುವ್ವಿ. ಹನು. ಮಂತ. ಸುವ್ವಿ
ಸುವ್ವಿ. ಭೀಮಂತ ಸೇನ ಸುವ್ವಿ
ಸುವ್ವಿ. ಮಧ್ವ ರಾಯರಿಗೆ. ಸುವ್ವಾಲಿ
ಎಂಬಂತೆ ಅಂಶಗಣಯುಕ್ತ. 'ಶ್ರೀಕೃಷ್ಣ ಬಾಲಲೀಲೆ' ಕನಕದಾಸರ 'ಕೇಶವನಾಮ' ಕೂಡ ಇದೇ ಛಂದಸ್ಸಿನವು

೧] ಕೃತಿಗೆ ಶ್ರೀಕಾರ ಹಾಕಿ ಶ್ರೀಪತಿ-ಭಾರತೀಪತಿಯರನ್ನು ವಂದಿಸಿದೆ. [ಶ್ರೀರಮಣ=ಮುದ್ರಿತ ಪಾಠ ಪ್ರಾಸಾನುಕೂಲವಲ್ಲ ]

೨] ದೇವತೆಗಳು ರಾಮ-ಹನುಮಾವತಾರಗಳಿಗೂ ಪ್ರಾರ್ಥಿಸಿದ್ದು ಕೃಷ್ಣಾವತಾರದಂತೆ [ಘನನ=ಮುದ್ರಿತ ಪಾಠ.]

೩] ವಾದಿರಾಜೀಯ ಪ್ರಾಸ. [ಅರಂತ್ಯ 'ಕಂಡರು' ಎಂದಿರುವುದರಿಂದ, ಪೊಗಳಿದರೆ-ಪಾಡಿದರೆ ಎಂಬ ಪಾಠಾಂತರ ಹೆಣ್ಣು ಮಕ್ಕಳ ಹಾಡಿಕೆಯಿಂದಾಗಿರಬೇಕು.]
ಕುಕ್ಷಿಲೋಲ=ಬಲಿವ ಬಾಗಿಲು ಕಾದವ

೯-೧೩] ವಾದಿರಾಜರಿಗೆ ಪ್ರಿಯವಾದ ದಶಾವತಾರ. [ನಿಗಮಗೋಚರ=ಉಡುಪಿ ಪಾಠ, ವಿದ್ಯವ=ಬೆಂಗಳೂರು, ಮೈಸೂರು ಮುದ್ರಣ. ಬಿಗಿದು=ಉ. ಪಾಠ, ಇಂದ್ರನಲೋಕ=ಬೆಂ, ಮೈ ಮುದ್ರಣ]. ಎರಡು ಹತ್ತು ಒಂದು ಬಾರಿ=೨೧ ಸಲ; ಮುದ್ರಿತ 'ಬಾಲಲೀಲೆ' ಪೂರ್ವಾರ್ಧ ೨೪೫ ರಲ್ಲಿ ಪ್ರಯುಕ್ತ [ಅದರ ಹಸ್ತಪ್ರತಿಯಲ್ಲಿ ಮಾತ್ರ 'ಮೂರು ಏಳು ಬಾರಿ' ಎಂದಿದೆ]. ಆಗಭೋಗ=ಆಗರ್ಭ ಭೋಗ (ಹುಟ್ಟು ಸಿರಿವಂತಿಕೆ)? [ಮತ್ತರಾಗುತಿದ್ದರು=ಹಸ್ತಪ್ರತಿ ಪಾಠ, 'ಹತ' ಎಂದಿದ್ದರೆ ಅರ್ಥಪೂರ್ಣ. ಅತ್ಯದ್ಭುತ ವಾಜಿಯನೇರಿ= ಉಡುಪಿ ಪಾಠ.] ಕೈಲಿ=ದೇಸೀರೂಪ (ಬಾಲಲೀಲೆಯಲ್ಲೂ ಪ್ರಯುಕ್ತ).

೧೪] ಹನುಮ ಸುವ್ವಾಲಿಯ ಆರಂಭ. [ಹನುಮಂತನಾದನು= ಉಡುಪಿ ಪಾಠ.]

೧೫] ಸುಂದರ ಕಾಂಡದಲ್ಲಿ ಹನುಮ ಬಂದೆರಗಿದ್ದು (ಸುಮಧ್ವವಿಜಯ ೧, ೧೧-೧೨.) 'ರಾಘವರ'ಎಂಬಂಥ ಗೌರವಾರ್ಥಕ ಬಹುವಚನ ವಾದಿರಾಜೀಯ ಪ್ರಯೋಗ. ಈ ನುಡಿ ಉಡುಪಿ ಪ್ರತಿಗಳಲ್ಲಿಲ್ಲ.

೧೭] [ನಿರ್ಭಯದಿಂದ=ಉಡುಪಿ ಪ್ರತಿ, ಹಸ್ತಪ್ರತಿ.]

೧೮] ಉಡುಪಿ ಪ್ರತಿಗಳಲ್ಲಿಲ್ಲ, ಬೆಂಗಳೂರು ಮೈಸೂರು ನುಡಿ ಭಿನ್ನ (ಮಾರ್ಜಾಲನಾಗಿ ಹುಡುಕುತ್ತಿದ್ದಂತೆ).

೨೦] ವಾಯಸರೇಖೆ=ಕಾಗೆ ಗೆರೆ.

೨೩] [ಸೂಕ್ಷ್ಮರೂಪದಿಂದ=ಉಡುಪಿ-ಹಸ್ತಪ್ರತಿಪಾಠ, ಆಶ್ಚರ್ಯ ರೂಪದಿಂದ=ಬೆಂಗಳೂರು ಪಾಠ.]

೨೪-೫] ರಾವಣನ ನುಡಿ ಚಿತ್ರ.

೨೬-೭] ರಾವಣ–ಸೀತಾ ಸಂವಾದಾರಂಭ. ಅಲ್ಪ ವ್ಯತ್ಯಾಸಗಳಿಂದ ನುಡಿಗಳನ್ನು ಪುನರಾವರ್ತಿಸುವ ವಾದಿರಾಜೀಯ ದೇಸಿಶೈಲಿ.

೨೮] ಪಾವುಡ=ನೆಲಮುಡಿ, ತಾಹರು=ತರುವರು (ನಡುಗನ್ನಡ) [ತಾವರು=ಬೆಂಗಳೂರು, ಮೈಸೂರು ಪಾಠ, ಉಡುಪಿ ಪ್ರತಿಗಳಲ್ಲಿ ನುಡಿ ಇಲ್ಲ].

೨೯] ವಾದಿರಾಜೀಯ ಪ್ರಾಸ [ಮಡಿದೆಲೆಯ=ಉ. ಪಾಠ, ಮಡಿಚೆಲೆಯ=ಬೆಂ. ಮೈ. ಪಾಠ].

೩೦] [ಮಲಗು=ಉ. ಪಾಠ.]

೩೨-೩] [ಮಲಗುವೆ ನೀ–ಒಪ್ಪುವೆ ನೀ=ಉ. ಪಾಠ.]

೩೪[ [ಹತ್ತಲಿದ್ದ ತ್ರಿಜಟೆ ಮಿತ್ರರೆಲ್ಲ=ಉ. ಪಾಠ, ಸುತ್ತಲಿದ್ದ ತ್ರಿಜಟೇರು ಮಿತ್ರೇರೆಲ್ಲ=ಬೆಂ. ಮೈ. ಪಾಠ.]

೩೬] [ಪಟ್ಟಣ=ಉ. ಪಾಠ; ಬೆಂ. ಮೈ. ಪ್ರತಿಗಳಲ್ಲಿ ಈ ಸಾಲು ಇಲ್ಲದೆ, ೩೫-೬ ಬೆರೆತಿವೆ, ಸಾರಿತೆಂದರು ಪಾಠದೊಡನೆ] ಹೋಗೋ=ಹೋಗು (ವ).

೩೭] ಶಿರವ ನೆಲಕೆ ಹರಿಯ ಬೀಳ ಕಂಡೆವು=ಉ. ಪಾಠ, ರಾವಣನ ಹತ್ತು ಶಿರವಗಳೆದು ಬಿಡುವನು=ಬೆಂ. ಮೈ. ಪಾಠ.]

೪೦] [ಕಳಿಸಿ=ಉ. ಹ. ಪ್ರತಿ ಪಾಠ.]

೪೨] ಉರದಲಿಟ್ಟು ಶಿರದಲಿಟ್ಟು ಕೊಳುತಿದ್ದಳು=ಉ. ಪಾಠ.]

೪೫-೮] [ತೊಳವುತಿಪ್ಪ=ಉ. ಪಾಠ, ಚಿತ್ತೈಸು=ಏಕವಚನದ ಪಾಠ. ರಕ್ಕಸರ ಪಡೆಗಳು=ಉ. ಪಾಠ, ಸುತ್ತಲಿದ್ದ ಕಾವಲು ಬೆನ್ನತ್ತಿ ಬಾಹೊ ಭಟೆರು ಎಲ್ಲ=ಬೆಂ. ಮೈ. ಪಾಠ.] ೪೭-೮ರ ಉತ್ತರಾರ್ಧ ಒಂದೇ.

೪೯-೫೦] ರಾಮರ ಒಡಗೂಡಿ ಬಾರೊ ಎಂದು ಹೇಳುತ್ತಿದ್ದಳು=

ಉ.ಪಾಠ, ಎರಗಿ ನಡೆದನು=ಉ.ಪಾಠ, ಕಿತ್ತು ಬಿಸುಟು= ಮುದ್ರಿತ ಪಾಠ.

೫೨-೩] ಉಡುಪಿ ಪ್ರತಿಗಳಲಿಲ್ಲ; ಸದೃಶ ಉತ್ತರಾರ್ಧ, ದೇಸೀಯ ಸತ್ವಯುತ.

೫೪] ವಾದಿರಾಜೀಯ ಪ್ರಾಸ.

೫೮] ರಾವಣ-ಹನುಮ ಸಂವಾದಾರಂಭ [ದಾವ-ದಾರ=ಉ. ಹ. ಪ್ರತಿ, ರಾವಣ=ಉ. ಪಾಠ.]

೬೮-೧] ಉಡುಪಿ ಪ್ರತಿಗಳಲಿಲ್ಲ; ತಳಿಗೆ=ತಟ್ಟೆ.

೬೨] ಬೆಂ. ವ್ಯೈ. ಪ್ರತಿಗಳಲಿಲ್ಲ. [ಬಳಸಿ=ಉ. ಹ ಪಾಠ].

೬೫-೬] ಅನುಪ್ರಾಸ [ಆಳು ಬಂಟರನ್ನು ಕರೆಸಿ ಹೇಳುತಿದ್ದನು=ಉ. ಪಾಠ.

೬೭-೯] ಸದೃಶ ನುಡಿ [ಪೆಂಡೆಗಳ ತೆಗೆದು ತಂದು=ಉ. ಪಾಠ].

೭೦-೭೧] [ಸೀತಾದೇವಿಯ ಸೀರೆಯು=ಉ ಪಾಠ]. ೭೧ರ ಉತ್ತರಾರ್ಧ ೬೫ರಂತೆ.

೭೨-೩] [ಶಿಲಾ ಮೊದಲಾದವರು=ಉ. ಪಾಠ, ಶಿಶು ಮೊದಲಾದವರು=ಬೆಂ. ವ್ಯೈ. ಪಾಠ.] ಅನುಪ್ರಾಸ.

೭೪-೮] ಈ ಭಾಗದ ಆದ್ಯಂತ ಚರಣ ಒಂದೇ ನುಡಿಯಾಗಿ, ಮಧ್ಯದ ಸಾಲುಗಳಿಲ್ಲ ಮುದ್ರಿತ ಪ್ರತಿಗಳಲ್ಲಿ. ೭೬-೭=ಅನುಪ್ರಾಸ. ಯಾತುಧಾನಪತಿ=ರಾಕ್ಷಸರೊಡೆಯ (ರಾವಣ). [ಸಾರೆ=ಉ. ಪಾಠ.]

೭೯] ವಾದಿರಾಜರಿಗೆ ಪ್ರಿಯವಾಗಿ ಕೃಷ್ಣಾವತಾರದಂಶ ಮೊದಲು ಉಕ್ತ.

೮೦-೮೨] [ಹರುಷಭರಿತನಾಗಿ, ಮಾಡಿದ, ಘನತೆಯಿಂದ=ಉ.ಪಾಠ, ಗಮಕದಿಂದ=ಹ ಪ್ರತಿ.]

೮೫) [ಕೃಷ್ಣನ=ಉ. ಪಾಠ, ಭೀಮಸೇನ=ಬೆಂ. ನ್ಯೂ. ಪಾಠ.] ನೋ–ಸು. ವಿ. ೧–೨೮.

೫] ಅವತಾರಾಂತರಗಳೊಡನೆ ಪಲ್ಲವಿಯೂ ಸೇರಿ, ಸುವ್ವಾಲಿಗಳೂ ಅಂತರಿಸಿವೆ.

## ಭೀಮ ಸುವ್ವಾಲಿ

೧] ವಜ್ರಾಯುಧ ಗಿರಿಯ ರೆಕ್ಕೆ ತೆಗೆದರೆ, ಕುಂತಿ ಬಿಸುಟ ಭೀಮಶಿಶು ಗಿರಿಯನ್ನೇ ನುಚ್ಚು ನೂರಾಗಿಸಿ, ಅದು ಶತಶೃಂಗವೆನಿಸಿತು (ಸು. ವಿ. ೧–೨೯).

೨–೪] ಉಡುಪಿ ಪ್ರತಿಗಳಲಿಲ್ಲ; ಬೆಂ. ನ್ಯೂ. ಪಾಠಗಳು ಹಸ್ತಪ್ರತಿಗಿಂತ ತುಸು ಭಿನ್ನ.

೫–೧೧] ಭೀಮ ಗೆಲ್ಲುತ್ತಿದ್ದ ಬಗೆ ಇವು (ಸು. ವಿ. ೧–೩೧) ಮುದ್ರಿತ ಪಾಠ ಸರಿಯಾಗಿಲ್ಲ. ೧೧=ಬೆಂ. ನ್ಯೂ. ಪ್ರತಿಗಳಲ್ಲಿ ಮಾತ್ರವಿದೆ [ಕಚ್ಚುತಿರಲು=ಬೆಂ. ಪಾಠ].

೧೨–೪] ಸು. ವಿ. ೧–೩೨ ರಿಂದ ಸೂಚಿತ. ೧೩ನೆಯ ನುಡಿ 'ಶ್ರೀಕೃಷ್ಣ ಬಾಲಲೀಲೆ'ಯ ಉ. ೨೧೧ ಕ್ಕೆ ಸಮನಾಗಿ, ಎರಡೂ ಕೃತಿಗಳ ಏಕಕರ್ತೃತ್ವದ್ಯೋತಕ.

೧೫ ೮] ಬಕವಧೆ. [ವಿಪ್ರವೇಷ ನಿಗಮ ವೇದ ಚರಿಸುತಿರಲು ಉ. ಪಾಠ.] ೧೭=ಮುಖ್ಯನುಡಿ, ಮುದ್ರಿತ ಪ್ರತಿಗಳಲಿಲ್ಲ!

೧೯] ದ್ರೌಪದಿ ಸ್ವಯಂವರದ ಪ್ರಾರಂಭ; ಬೆಂ. ನ್ಯೂ. ಪ್ರತಿಗಳಲಿಲ್ಲ.

೨೦–೩೭] ಉಡುಪಿ ಪ್ರತಿಗಳಲಿಲ್ಲ; ಬೆಂ. ನ್ಯೂ. ಪ್ರತಿಗಳಲ್ಲಿ ಸಂಕ್ಷಿಪ್ತ, ವಿಕ್ಷಿಪ್ತ; ಇವಕ್ಕೆ ಬಾಲಲೀಲೆಯ ನುಡಿ ಕೆಲವು ಸಂವಾದಿ–

| | ಬೆಂ. ಪ್ರತಿ | ಮೈ. ಪ್ರತಿ | ಬಾಲಲೀಲೆ (ಉ) |
|---|---|---|---|
| ೨೧-೨ | ೧೪-೫ | ೮೬-೭ | ೨೧೫-೬ |
| ೨೩ | ೧೬ | ೮೮ | ೨೧೯ |
| (೨೪) | ೧-೭ | ೮೯ | — |
| ೨೫ | ೧೮ | ೯೦ | ೨೨೦ |
| (೨೬-೭) | ೧೯-೨೦ | ೯೧-೯ | — |
| ೨೮ | ೨೧ | ೯೩ | ೨೨೩ |

(ಗುರು ಪಾರ್ಥ ಬದುಕಿರಲು ಸಾತ್ಯಕಿ ಕುಣಿದ)

| | | | |
|---|---|---|---|
| (೨೯-೩೦=ಉತ್ತರಾರ್ಧ ಸದೃಶ.) | | | — |
| ೩೧ (-೨ ಸದೃಶ) | ೨೨ | ೯೪ | ೨೨೪ |
| ೩೩-೭ | ೨೩-೭,೩೬ | ೯೫-೯,೧೦೮ | ೨೨೫-೯ |

(ಸೋದರಮಾವ=ಶಲ್ಯ)

[ಬಿಟ್ಟಗದ್ದಿಗೆಯನಳಿಯೆ, ಕೊಂದ, ಖಡ್ಗವೆತ್ತಿ ಸಭೆಯೊಳಗೆ, ಗೆಲಿದ]

[ಎತ್ತಿಕೊಂಡರಾಯುಧವ=ಹ. ಪ್ರ. ಕೊಂದ=ಮು. ಆಗದಂತೆ ತಾನಾಗಿ ಇಳಿಸಿದ=ಮು.]

೩೮-೯ ] ಉಡುಪಿ ಪ್ರತಿಯು ೧೫-೬ [ಬೆಂ. ಮೈ. ಪ್ರತಿಗಳಲಿಲ್ಲ].

೪೦ ] ಬೆಂಗಳೂರು ಮೈಸೂರು ಪ್ರತಿಗಳಲ್ಲಿ ಮಾತ್ರವಿದೆ; ನಿ-ಧಾನ=ಸಂಪದ.

೪೧ ] ಉ. ಪ್ರತಿಯು ೧೭, ಬೆಂ. ಮೈ. ಪ್ರತಿಗಳಲಿಲ್ಲ.

೪೨-೮೩] ದ್ರೌಪದಿ ಸ್ವಯಂವರದ ನುಡಿಗಳಿವು ಉ. ಪ್ರತಿ ಬಿಟ್ಟು, ಮಿಕ್ಕಂತೆ ಸಂವಾದಿ—

| | ಬೆಂ. ಪ್ರತಿ | ಮೈ. ಪ್ರತಿ | ಬಾಲಲೀಲೆ (ಉ) |
|---|---|---|---|
| ೪೨-೩ | ೨೯-೩೦ | ೧೦೦-೨ | ೨೩೧-೨ |

[ತಾಯಿ ಕನ್ಯಾರತ್ನವು ಎಂದು ಚೆನ್ನಾಗಿ....ಮಾತನಾಡಿದ=ಬೆಂ. ಪ್ರ.]

ಬೆಂ. ಪ್ರತಿ ಮ್ಯೆ. ಪ್ರತಿ ಬಾಲಲೀಲೆ (ಉ)

೪೫-೭ ೩೧-೩ ೧೦೩-೫ ೩೩೩-೫ [ಹೆಣ್ಣು]
[೨೩೬-೭=ತಂದೆ
ಯಾಜ್ಞೆಯಂತೆ ಧೃಷ್ಟದ್ಯುಮ್ನ ಬಂದು ಕೇಳಿದ ವಿವರ]

೪೮ ೩೪ ೧೦೬

(೪೮-೯ ಶೃಂಖಲೆಯಂತೆ ಪುನರಾವರ್ತಿತ ೪೯-೫೦ ರಲ್ಲಿ.)

೫೧ ೩೫ ೧೦೭ ೨೩೮

೫೨-೪ ೩೭ ೧೦೯ ೨೩೯

೫೮-೯ ೩೮ ೧೧೦ ೨೪೦-೧

(ಕ್ಷತ್ರಿಯ ಆಯುಧ ಶಾಲೆ ಹೊಕ್ಕ.)

೬೧-೩ ೩೯-೪೦ ೧೧೧-೨ ೨೪೨ ೩

(೬೫-೬ ಪುನರಾವರ್ತಿತ, ೨೯-೩೦ ಕ್ಕೂ.)

೬೭ ೪೧ — ೨೪೪

೬೮ — — ೨೪೫

[೭೧=ಪಂಚ ದ್ರೌಪದಿ=ಶ್ಯಾಮಲಾ, ಭಾರತಿ, ಶಚಿ, ಉಷಾ, ಉಮಾ(ಗುಪ್ತರೂಪಿ ಬ್ರಹ್ಮಶಾಪಾನುಭವಕೆ, ಅಶ್ವತ್ಥಾಮ ಸಂಪರ್ಕವಿಲ್ಲ) ನೋ. ಕ. ತಾ. ನಿ. ಪು. ೧೨೩-೫೨. ೭೨ ರಂತ್ಯ ೬೭ ರಂತೆ.]

೭೩-೭ ೪೨-೬ ೧೧೪-೮

(ಐವರೂ ೪ ರೂಪ ವರಿಸಿದ್ದು, ೮೨ರ ತನಕ ಪಾಠಾಂತರ ಇವೆ).

೮೩ ೪೭ ೧೧೯

(ನಾಗೋಲಿ=ನಾಗಬಲಿ, ಲಕ್ಷ್ಮಿಶೋಭಾನೆ ೧೧೧)

೮೪-೮] ಪುನರಾವರ್ತನೆ, ಉ. ಪ್ರ. ೧೮ರಿಂದ ಸೂಚಿತ. ೮೬-೭ರ ಮಧ್ಯದ್ದಂಬಂಧ ನುಡಿ-
ಕೃಷ್ಣ ಪರಿವರವನು ಕೊಟ್ಟು ಪಾಂಡವರಿಗೆ
ಕೃಷ್ಣೆಗೆ ಕೊಟ್ಟ ವಿಚಿತ್ರ ಕೋಶವ (ಬಾ. ಲೀ. ಉ. ೨೫೭).

**ಬೆಂ. ಪ್ರತಿ   ಮೈ. ಪ್ರತಿ   ಬಾಲಲೀಲೆ (ಉ)**

೮೭–೮ ೪೮-೯ ೧೨೦–೧ (ಕೊನೆಯದು=ಉ. ಪ್ರ. ೧೯.)

೮೯ ] ೫೦ ೧೨೨ (ಉ. ಪ್ರ=೨೦.)

೯೦–೭ ] ೯೦-೧ ೫೧–೨ ೧೨೩-೪

(೯೨=ಹ.ಪ್ರ.ಯಲ್ಲಿ ೫೦ ೯೩=೧೮ ಪುನರಾವರ್ತಿತ.)

೯೪ ೫೩ ೧೨೫ (ಹಿಂದು ಮುಂದಿನ ನುಡಿ ಬಾ.ಲೀ. ಉ. ೩೭೯-೮೨.)

೯೭ ೫೪ ೧೨೬ (ಕೃಷ್ಣ ಬಂದ ವಿವರ ಬಾ. ಲೀ. ಉ.೩೮೩–೭.)

೯೮ ] ೫೫ ೧೨೭ (ಉ.ಪ್ರ.=೨೧. ವಿವರ ಬಾ.ಲೀ. ಉ.೩೮೮-೪೨೩.)

೯೯–೧೦೦] ೫೬–೭ ೧೨೮–೯ (ದ್ರೌಪದಿ ಕೌರವರ ಸಂವಾದ.)

೧೦·೧೦೫] ೧೦೧–೨ ೫೮–೯ ೧೩೦ (ಪುನರಾವರ್ತನೆ, ಹ. ಪ್ರತಿಯಲ್ಲಿ ಹಿಂದು ಮುಂದು.)

(೧೦೩–೫) ೬೦–೨ ೧೩೧–೩ (ಪುನರಾವರ್ತನೆ.)

೧೦೬ ೬೩ ೧೩೪

[ಹ. ಪ್ರ.=ಮುಗಳೆ, ಕೇಳಿದನು, ಕೃಷ್ಣ, ಕಷ್ಟಪರಿಹಾರವು ]

೧೦೯–೧೦ ೬೪–೫ ೧೩೫–೬ (ಪುನರಾವರ್ತನೆ.)

[ಹ. ಪ್ರ.=ಅಂಗಿ, ಕೌರವನು, ಕಂಗಳಿಲ್ಲವೋ; ಬೆಂ.ಮೈ. =ಎನುತ ಕೇಳ್ಯಾಳು; ಹ. ಪ್ರ.=ಅಲ್ಲಿದ್ದ ನೀರೊಳಗೆ ಬಿದ್ದನೆ ಕೌರವನು, ನಿಂತನು.]

(೧೧೧) ೬೬ ೧೩೭

(೧೧೪-೫) ೬೭–೮ ೧೩೮–೯ (ಪುನರಾವರ್ತನೆ.)

| | ಉ. ಪ್ರತಿ | ಬೆಂ. ಪ್ರತಿ | ಮೈ. ಪ್ರತಿ ಬಾ.ಲೀ. (ಉ) |
|---|---|---|---|
| ೧೧೬ ] | ೨೨ | — | — |
| ೧೧೭ ] | — | (೬೯)೭೦ | (೧೪೦)೪೧ (ಪುನರಾವರ್ತನೆ.) |
| ೧೨೦-೧] | — | ೭೧-೨ | ೧೪೨-೩ ,, |
| ೧೨೨ ] | ೨೩[ಶಕ್ತಿ] | ೭೩[ಶಬ್ದ] | ೧೪೪ |
| ೧೨೪ ] | — | ೭೪ | ೧೪೫ [ಹ. ಪ್ರ.=ಪರಮ ಸೌಖ್ಯವು.] |
| ೧೨೬-೭] | ೨೪-೫ | ೭೫-೬ | ೧೪೬-೭ (೨ ಗೋಗ್ರಹಣ ಉಕ್ತ.) |
| ೧೨೮ ] | ೨೬ | (೭೭?) | —(ಧಾರ್ತರಾಷ್ಟ್ರ=ಕೌರವರ.) |
| ೧೨೯-೩೦] | ೨೯-೮ | ೭೮ | ೧೪೮ (ಸದೃಶ ನುಡಿ) |
| ೧೩೧-೨] | — | ೭೯-೮೦ | ೧೪೯-೫೦[ಮೈ. ಪ್ರ=ಬಂದನು ಮಧ್ಯವರ್ತಿಗೆ.] |
| ೧೩೩-೪] | ೨೭ | ೮೧-೨ | ೧೫೧ (ಪುನರಾವರ್ತನೆ) |
| ೧೩೫ ] | — | ೮೩ | ೧೫೨ (೧೨೩ರಂತೆ.) [ಬೆಂ. ಪ್ರ=ಮದದಿ] |
| ೧೩೬ ] | ೩೦ | — | — |
| ೧೩೭-೮] | ೩೨ | ೮೫-೪ | ೧೫೪-೩ |
| ೧೩೯ ] | ೩೧ | ೮೬ | ೧೫೫ [ಹ. ಪ್ರ=ಪಡೆದ ಮಕ್ಕಳನ್ನು.] |
| ೧೪೦ ] | ೩೪ | — | — |

ಈ ತೌಲನಿಕ ಟಿಪ್ಪಣಿಯಿಂದ ಉಡುಪಿ ಪ್ರತಿ ಸಂದರ್ಭ ತಿಳಿಯದಷ್ಟು ಸಂಕ್ಷಿಪ್ತವೆಂದೂ, ತುಸು ಬೆಳೆದ ಬೆಂಗಳೂರು ಮೈಸೂರು ಪ್ರತಿ ತಪ್ಪಾಗಿ ಅಚ್ಚಾದದ್ದೂ, ಮುಮ್ಮಡಿ ಹಸ್ತಪ್ರತಿ ಹೆಚ್ಚು ತೃಪ್ತಿಕರ

ವೆಂಬುದೂ ಸ್ಪಷ್ಟ. ಅಲ್ಲದೆ, ಭಿನ್ನ ಆಕರಗಳ 'ಬಾಲಲೀಲೆ'ಯ ನುಡಿ ಕೆಲವು ಸಂವಾದಿಯಾಗಿರುವುದಿಲ್ಲಿ ಉಭಯ ಕೃತಿಗಳ ಏಕಕರ್ತೃಕತ್ವಕ್ಕೆ ದ್ಯೋತಕ.

## ಮಧ್ವ ಸುಪ್ವಾಲಿ

೧] ಹ. ಪ್ರ. ೧. ಸುರರ ಮೊರೆ (ಹನುಮ ಸುಪ್ವಾಲಿ ೧೪, ಬಾಲಲೀಲೆ ಪೂ. ೧೬, ಸುಮಧ್ವವಿಜಯ ೨-೧ರಲ್ಲೂ ಇದೆ.)

೨] ಬೆಂ. ಪ್ರ. ೨=ನ್ಯೋ. ಪ್ರ.೧೫೮ [ಭೀಮ]

೩] ಉ. ಪ್ರ. ೧ [ಜಗದೀಶ್ವರನ ಪಾದಕಮಲ.] ಅಸುರಾದಿಷು ತಾಪಂ,ಕೀರ್ತಿಂ ತ್ರೈಲೋಕ್ಯಾಂ, ಹೃದಯೇ ಮುಕುಂದಂ ನಿಧಾಯ (ಸು. ವಿ. ೧-೪೪).

೪] ಉ. ಪ್ರ. ೩ [ಅಸುರರ ಹೃದಯದಲ್ಲಿ ಬಹಳ ಸಂತಾಪವಿಟ್ಟು, ಮುನೀಶ್ವರರಿಗೆಲ್ಲ].

೫] ಉ. ಪ್ರ. ೪ [ಹೇಳಿದ]. ಅನಂತೇಶ್ವರನ ಆವಿಷ್ಟವಾಕ್ಯ=ಸು ವಿ. ೨,೬-೮.

೬-೭] ಸದೃಶ ನುಡಿಜೋಡು. ಬೆಂ. ಪ್ರ. ಯಲಿಲ್ಲ.

೮] ಮಧ್ಯಗೇಹ=ನಡ್ಡಂತಿಲ್ಲಾಯ (ತುಳು)=ನಡುಮನೆಯ.[ಉ. ಪ್ರ.=ಲಕ್ಷ್ಮೀಲೋಲ.] ಮಧ್ವಜನ್ಮ ಕ್ರಿ. ಶ. ೧೨೩೮ ವಿಜಯದಶಮಿ.

೯-೧೩] ಅನಂತೇಶಾರ್ಪಿತ ಬ್ರಹ್ಮಶಿಶುವಿನೊಡನೆ ಬರುತ್ತ ಭೂತನಾಥ ಕೆಲವರಿಂದ ರಕ್ತಮಾತ್ರ ಕಾರಿಸಿದ=ಸು. ವಿ. ೨, ೩೧-೪.

| ಉ. ಪ್ರತಿ | | ಬೆ.ಂ ಪ್ರತಿ | ನ್ಯೋ. ಪ್ರತಿ |
|---|---|---|---|
| ೯ | ೮ | ೫ | ೧೬೩ |
| [ತೀವ್ರದಿಂದ] | | | [ಪ್ರೀತಿಯಿಂದ] |

ಉ. ಪ್ರತಿ    ಬೆಂ. ಪ್ರತಿ    ಮೈ. ಪ್ರತಿ

೧೦-೧೧ ೧೪,೧೬ — ೧೬೮-೯

[ಉ. ಪ್ರ.=ತಾಯಿ ಆ ಗುಡಿಯ ದೇವರಿಗೆ ಕೈಯ ಮುಗಿದು ತೀವ್ರದಿಂದ]

೧೨-೩ ೯ — —

(ಉ. ಪ್ರ.=ಪೂರ್ವಾರ್ಧ ೧೫ರದು!)

೧೪-೭] ತಾಯಿ ವೇದವತಿ ಹೊರಗೈದಲು ಮಗಳು ಮಗುವಿಗೆ ಹುರುಳಿ ತಿನಿಸಿದ್ದು=ಸು. ವಿ. ೨,೩೫-೪೨.

(೨,೧೯ರಂತೆ ೧೨ ವರ್ಷ ತಪಿಸಿದ್ದರಿಂದ ಮಗಳಿಗೆ ೧೩ ವರ್ಷ, ಕಲ್ಯಾಣಿ ಎಂದು ಹೆಸರಿಸಿದೆ ಅಣುಮಧ್ವವಿಜಯ ವ್ಯಾಖ್ಯಾನದ ಬನ್ನಂಜೆ ಟಿಪ್ಪಣಿ.)

೧೪ ೧೦ ೬ ೧೬೪

[ಉ..ಪ್ರ=ಅಳುತಲಿದ್ದರು. ಮೈ.ಪ್ರ.=ಮಗನ ಮನೆಯೊಳಗೆ ಇಳಿಸಿ ಕೆಲಸಕ್ಹೋದಳು.]

೧೫ ೧೦ ೭ ೧೬೫

ಕುಚ್ಚಿದ=ಕುದಿಸಿದ [ಉ. ಪ್ರ.=ಎತ್ತಿಕೊಂಡರಲ್ಲದೆ, ಕುಟ್ಟಿದ.]
[ಮೈ. ಪ್ರ.=ಎತ್ತಿಕೊಂಡರೆಲ್ಲರು ಕಚ್ಚಿ ಹೋರಿ ಒದರುತಿದೆ.]

೧೬ ೧೨ ೮ ೧೬೬

[ಉ. ಪ್ರ.=ತಿನಿಸಲು. ಬೆಂ. ಪ್ರ.=ಎತ್ತಿಗಿಡುವ, ತಿನಿಸಿದಿ ಎಂದು ಬಹಳ. ಮೈ. ಪ್ರ.=ತಿನಿಸಲು.]

೧೭ ೧೩ ೯ ೧೬೭

ಕೇಲಿ=ಮಡಕೆ (ಬಾಲಲೀಲೆ ಪೂ. ೩೨೯) [ಉ. ಪ್ರ.=ಮರಳುತಿಪ್ಪ ಕಲಂಗಳಲಿ, ತಾಯಿ ತಂದೆ ಹರಿಗೆ. ಮೈ. ಪ್ರ.=ವಾಸುದೇವ.]

೧೮] ವರ್ಷದ ಮಗು ಎತ್ತಿನ ಬಾಲ ಹಿಡಿದು ಚರಿಸಿದ್ದು=ಹ. ಪ್ರ. ೨೫=ಸು. ವಿ- ೨,೪೫-೯.

೧೯] ಎತ್ತು ಇತ್ತವನ ಸಾಲಕ್ಕೆ ಹುಣಿಸೆಪಕ್ಕ ಎಣಿಸಿದ್ದ=ಹ. ಪ್ರ· ೩೨=ಸು. ವಿ. ೨,೫೦-೩

ಉ. ಪ್ರತಿ ಬೆಂ. ಪ್ರತಿ ವ್ಯೆ. ಪ್ರತಿ

೨೭ ೧೯ ೧೭೯

[ಉ. ಪ್ರ.=ಬೇಡಿದವಗೆ ಹುಣಿಸೆ ಬಿತ್ತ. ವ್ಯೆ. ಪ್ರ.=ಪಿತೃಋಣವ ಕೇಳಿ, ಆಡುತಿರಲುಹುಣಿಸೆಪಕ್ಕ, ಎಣಿಸಿಕೊಟ್ರೆ, ಆಯಿತವರಿಗೆ].

೨೦-೭] ತವರು ನಡುವೇರಿ. ೨ ವರ್ಷದ ಮಗು ಕುಡುವೂರ ಕಾನನ ತಾಳಿಕುಡೆ (ಬನ್ನಂಜೆ) ಮೂಲಕ ೨ ಯೋಜನ ನಡೆದು ಉಡುಪಿ ಗೈದಿತು; ಹುಡುಕುವ ತಂದೆಗೆ ಜನರೆತ್ತಿ ತರುವುದು ಕಂಡಿತು=ಸು. ವಿ. ೩,೧-೬.

೨೦ ೧೭ ೧೦ ೧೭೦

[ಉ. ಪ್ರ.=ಒಳಗೆ ಬಹಳ ಉತ್ಸಾಹದಿಂದ, ವ್ಯೆ. ಪ್ರ.=ಮದುವೆ ಎಂಬ ಪರಮೋತ್ಸಾಹದಿಂದ].

೨೦ — ೧೦ ೧೭೦

(ಹ. ಪ್ರತಿ ೧೦)

೨೨ ೧೫ ೧೨ ೧೭೨

[ಉ. ಪ್ರ.=ಎಲ್ಲಿಗೆ ಹೋದಿರೆಂದು ಎಲ್ಲರು ಕೇಳುತಿರಲು. ವ್ಯೆ. ಪ್ರ.= ಎಲ್ಲರು ಕಂಡು ಎಲ್ಲಿಗೆ ಪಯಣವೆನಲು].

೨೩-೪ ೧೮-೯ ೧೪-೩ ೧೭೩-೪

(ನುಡಿಜೋಡು) [ಉ. ಪ್ರ.=ಗ್ರಾಮಗ್ರಾಮ, ತೀವ್ರದಿಂದ.]
[ವ್ಯೆ. ಪ್ರ.=ಪುತ್ರನ, ಎಚ್ಚರದಿಂದ ಬಂದಳು].

೨೫-೬ ೨೦-೧ [ಸಿಕ್ಕಿತೆಂದರು] — (+ ಟಿಪ್ಪಣಿತ)
(ನುಡಿಜೋಡು)

೨೭ — — —

(ಹ. ಪ್ರ.=೨೯)

ಉ. ಪ್ರತಿ ಬೆಂ. ಪ್ರತಿ ಮೈ. ಪ್ರತಿ

೨೮] ಹ.ಪ್ರ. ೩೩ ೨೫ (+ ಟಿಪ್ಪಣಿತ)
[ಉ. ಪ್ರ.=ಮನಸಿಗೆ ಸುಖಕರವ ಮಾಡಿದರು] (ಸು.ವಿ. ೩, ೨೧-೭
=ಅಕ್ಷರಗಲಿತು ೫ನೆಯುವರ್ಷ ತಾಯೊಡನೆ ನೇಯಂಪಳ್ಳಿಗೈದಿ ಮಡಿ
ನಾಯು ಶಿವಭಟ್ಟನ ಪುರಾಣದರ್ಥ ತಿದ್ದಿದ್ದು.)

೨೯-೩೦] ಅರಲ್ಲಿ ಮುಂಜಿ (ಸು. ವಿ. ೩, ೩೧-೭ ಹಾಗೂ ೫೩=ಶೋ-
ಟಂತಿಲ್ಲಾಯ ಗುರುಸುತನ ಕಿವಿಯೂದಿ ಜಾತಿಸ್ಮರಣದಿಂದ ತಲೆ
ನೋವಿಳಿಸಿದ್ದು; ೯, ೪೭=ಈ ವಾಸುವೇವನಿಂದ ಯಜ್ಞಗೈಸಿದ್ದು.)
'ಕಮಲ ನೇತ್ರಗೆ.. ಗುರುವಿಗೆ' ಎಂದನ್ವಯ.

೨೯ — ೨೦ ೧೮೦
[ಮೈ ಪ್ರ.=ಬಹಳ ವಿಥ್ಯುಕ್ತದಿಂದ]

೩೦ ೨೮ ೨೧ ೧೮೧
[ಉ. ಪ್ರ.=ಮನೆಯೊಳಗೆ ಪಶುವು ಕರೆದು ವನದೊಳಗೆ ಆಡುತಿರಲು]
[ಮೈ. ಪ್ರ.=ಓದಿಕೊಂಡು, ಆಡುತಿರಲು]

೩೧-೨] ತಂದೆ ಬೆಟ್ಟದಡಿಯ ಪರಶು (ರಾಮಕೃತ) ಧನುರ್ಬಾಣ
ಗದಾ ತೀರ್ಥಸ್ನಾನ ಮುಗಿಸುವಲ್ಲಿ ಸಾಧನ ದ್ವಾದಶಿ ಮೀರುವುದಕ್ಕೆ
ಮಿಡುಕಲು (ತನಗೂ ತಾಯಿ ಮೀಯಲು ದೂರ ಬಿಡುತ್ತಿರದ
ಕಾರಣ) ಮನೆಯೆಡೆಯೇ ವಾಸುದೇವತೀರ್ಥ ನಿರ್ಮಿಸಿದರು. ತಂದೆ
ಸನ್ಮತಸ್ಥಾಪನ ನಂಬುವಂತೆ ದಂಡ ಊರಿ ಚಿಗುರಿಸಿದರು (ಇದೇ
ಇಲ್ಲಿ ಆಲದ ಐತಿಹ್ಯ). ನೋ-ಹೃಷಿಕೇಶತೀರ್ಥರ ಸಂಪ್ರದಾಯ
ಪದ್ಧತಿ ೫-೭.

೩೨ ೨೬ ೧೮ ೧೭೮
[ಉ. ಪ್ರ.=ಕವುಲದ(ರೆಂಬೆ), ಬಿಟ್ಟು. ಮೈ. ಪ್ರ.=ಪವಳದ, ಬಿತ್ತಿ]

೩೩] ೨೪ ೧೭ ೧೭೭
(ಹ. ಪ್ರ.=೨೮) [ಮೈಯ, ಕಚ್ಚುತಿರಲು. ಮೈ. ಪ್ರ.=ಎಡಗಾಲಿಂದ

....ಸವರಿ]. ಭೀಮ ಪಾದಾಹತ ಮಣಿಮಂತ ಸರ್ಪ ಕಚ್ಚಬಂದು ಮತ್ತೆ ಹತನಾದ (ಸು. ವಿ. ೧-೩೯,೪೭;೫-೧೭;೩,೩೮-೪೦).

| | ಉ. ಪ್ರತಿ | ಬೆಂ. ಪ್ರತಿ | ನ್ಯೂ. ಪ್ರತಿ |
|---|---|---|---|
| ೩೪-೫] | ೨೨-೩ | ೧೫-೬ | ೧೭೫-೬ |

[ಉ. ಪ್ರ.=ಇಳಿದು, ಜನರ. ನ್ಯೂ. ಪ್ರ.=ಧುಮುಕಿಬಂದು, ಜನರ.] ಸು- ವಿ. ೩, ೧೭=ಸಂ. ಪ. ೧೧-೨೮ ದುರ್ಗಾನವುನವಿಲ್ಲಿ ಆಟಿಕ್ಕೆ ತಿರುಗಿದೆ (ಹೋ. ೨೯ರಪೂರ್ವಾರ್ಧ). ಅಲ್ಲಿಂದ ಧುಮುಕಿ ಊರಿದ ಪಾದಗಳ ಹಿಂದೆ ಮೂರ್ತಿ ಸ್ಥಾಪಿಸಿದವರು ವಾದಿರಾಜರು.

ಇ೬] ೩೦ ೨೨ ೧೮೨

[ಉ. ಪ್ರ.=ಯೋಗಪಟ್ಟೆ, ಯೋಗದಿಂದ. ನ್ಯೂ. ಪ್ರ.=ಆ ಮಹಾ-ಯೋಗಿಗಳು.] ಯೋಗಪಟ್ಟೆ=ಸ್ಥಿರಾಸನ ಸಿದ್ಧಿಗೆ ಧರಿಸಿದ ನಡುಪಟ್ಟೆ (ಸು. ವಿ. ೭, ೩೦).

೩೭-೪೦] ೩೭ ೩೧ ೨೩ ೧೮೩

[ನ್ಯೂ. ಪ್ರ.=ಬಯಸದಿರು.]

೩೮ — ೨೪ ೧೮೪ ಪೂ.

[ನ್ಯೂ. ಪ್ರ.=ತುಪ್ಪವ ಕುಡಿದು.]

೩೯ ೩೨ — ,, ಉ.

[ಉ. ಪ್ರ.=ಹತ್ತು ಎಂಟು, ಕಷ್ಟಪಟ್ಟು. ನ್ಯೂ. ಪ್ರ.=ಚಿಕ್ಕವಗೆ.] (ಪೂ.=ಬಾಲಲೀಲೆ ೪೫೮.)

೪೦ ೩೪ ೨೫ ೧೮೬

[ಉ. ಪ್ರ.=ಭಿಕ್ಷುತನವ ಕೊಂಬುವ, ಕೊಟ್ಟೆ. ನ್ಯೂ. ಪ್ರ.=ಭಿಕ್ಷತನವಕೊಂಡು.] ತಾಯಿ-ಮಗನ ಸಂವಾದ ವಾದಿರಾಜ ಕಲ್ಪಿತ. (ಸಾವಿರ ವರ್ಷ=ಬಹುಲಾರ್ಥಕ.)

೪೧-೨] ೪೧ ೩೫ ೨೬ ೧೮೭

[ನ್ಯೂ. ಪ್ರ.=ಸಂತವಿಟ್ಟು.]

ಉ. ಪ್ರತಿ ಬೆಂ. ಪ್ರತಿ ನ್ಯೂ. ಪ್ರತಿ

೪೨ ೩೩ — ೧೮೫

[ಉ. ಪ್ರ.=ಕಟ್ಟಿಕೊಂಡ ಕೌಪಿನ] ೧೧ ರ ಪ್ರಾಯಕ್ಕೆ ಆಶ್ರಮನಾದಾಗ ತಮ್ಮ ವಿಷ್ಣುತೀರ್ಥರ ಜನನ. (ಪೂರ್ವಾಶ್ರಮ ನಾಮ ?) ಸತ್ಯಪ್ರಜ್ಞ-ಅಚ್ಯುತಪ್ರಜ್ಞ-ಪೂರ್ಣಪ್ರಜ್ಞ ಆಶ್ರಮ ಪರಂಪರೆಯ ನಾಮ; ಆನಂದಪದ ಶಾಸ್ತ್ರಕಾರ ಆನಂದತೀರ್ಥ (ಸು. ವಿ. ೫, ೨).

೪೩] ೨೯ — (+ ಟಿಪ್ಪಣಿತ)

[ಉ. ಪ್ರ.=ಜಗದ, ಹೊದ್ದವರ, ಆಶ್ಚರ್ಯ. ನ್ಯೂ. ಪ್ರ.=ಹೊಳೆವಲ್ಲಿ, ಹೊದ್ದವರ.] (ಸು. ವಿ. ೪, ೨೧.)

೪೪](ಹ.ಪ್ರ.-) — ೫೮ ೨೨೨ [ಬಿಟ್ಟನು]

ಅಚ್ಯುತಪ್ರಜ್ಞ ಮಿತ್ರಯತಿ ಶಿಷ್ಯರು ಮಧ್ವರಲ್ಲಿ ವಾದಿಸಿ ಸೋತುದು (ಸು.ವಿ. ೫, ೩-೭).

೪೫-೬] ೪೫ — ೬೧ ೨೨೫ [ಎನುತ]

೪೬ — — —(ಹ.ಪ್ರ.೯೨)

ಬುದ್ಧಿಸಾಗರ-ವಾದಿಸಿಂಹ ಬೌದ್ಧಗುರುಶಿಷ್ಯರು ವಾದಿಸಿ ಓಡಿದ್ದು (ಸು. ವಿ. ೫,೮-೧೫)?

೪೭] ೬೬ — —

(ಹ. ಪ್ರತಿ ೮೮; ಸು. ವಿ. ೫, ೩೦; ದಕ್ಷಿಣಯಾತ್ರೆ.)

೪೮] ೫೮ ೫೦ ೨೧೪

(ಹ. ಪ್ರ.=೭೫) [ಉ. ಪ್ರ.=ಭಕ್ತಿಯುಳ್ಳ ಶಿಷ್ಯನ, ಅಕ್ಷಯ ಮಾಡಿಕೊಟ್ಟು ಭಕ್ಷವ ಮಾಡಿದರು. ನ್ಯೂ.ಪ್ರ.=ಭಕ್ತಿಯುಳ್ಳ ಜನರ ಭಿಕ್ಷೆಯನ್ನು ಕೊಂಡರಾ ಅಕ್ಷಯಾತ್ಮಕ] ವಿಷ್ಣುಮಂಗಲದಲ್ಲಿ ಬಾಳೆಗೊನೆ ತಿಂದರು (ಸು. ವಿ- ೫,೩೧).

೪೯] ಹ. ಪ್ರ ೯೧ [ಬಿಸುಟು]. ತಿರುವನಂತಪುರದ ಕುದುಪುಸ್ತೂರ ಶಂಕರ ದಂಡ ಮುರಿವೆನೆಂದು ಯತಿಯಾಗಿ ರಾಮೇಶ್ವರದಲ್ಲಿ ಕಂಡು ಭಂಗಿತನಾದ (ಸು. ವಿ. ೫,೩೮-೪೪).

ಉ. ಪ್ರತಿ    ಬೆಂ ಪ್ರತಿ    ನ್ಯಾ. ಪ್ರತಿ

೫೦] ೫೭ — ೨೦೦
(ಹ. ಪ್ರ.=೭೪) [ನ್ಯಾ. ಪ್ರ.=ಕಲ್ಮಷಂಗಳ, ತಾತ್ಪರ್ಯಭಾಷ್ಯ.] (ಸು. ವಿ. ೬, ೩೨.)
ಶ್ರೀರಂಗ–ಕೇರಳ ಮಾರ್ಗದಿಂದ ಮರಳಿ, ಗೀತಾಭಾಷ್ಯ ರಚಿಸಿ ಗುರುಗಳಲ್ಲಿದ್ದ ಲಿಕುಚವಂಶದ ಜೇಷ್ಠಯತಿಗಳಿಗಿತ್ತರು.
೫೧–೯] ಬದರೀಯಾತ್ರೆ (ಸು. ವಿ. ೬, ೩೪–೯; ೧೩). ಇಲ್ಲಿ ವ್ಯಾಸ-ನಾರಾಯಣ ಸಂದರ್ಶನವಷ್ಟೇ ಸೂಚಿತ.

೫೧–೨ ೩೬–೭ ೨೯–೩೦ ೧೯೦–೧
[ಉ. ಪ್ರ.=ತಿರುಗಿ ಹೋಗಿ, ರುದ್ರರಿಂದಲಾದರು. ನ್ಯಾ ಪ್ರ.=ತೆರಳಿ ಪೋದರು, ರುದ್ರರಿಂದ ವರ್ಣಿಸಿದರು.]

೫೩ ೪೦ — (+ ಟಿಪ್ಪಣಿ)
[ನ್ಯಾ. ಪ್ರ.=ವಿಷ್ಣುದಾಸಗೆರಗಿ ಕೈಯ ಮುಗಿದು ನಿಂತರು.]

೫೪–೫ ೩೮–೯ — (+ ಟಿಪ್ಪಣಿ)
(೫೪ಪೂ=೩೬ಪೂ.) [ನ್ಯಾ. ಪ್ರ.=ಯೋಗಬಟ್ಟೆ, ಜಡೆಗಳು, ಯೋಗಿಗಳು, ಯೋಗಿಮಧ್ವರಾಯರ, ಸರಸಿಜೇಕ್ಷಣ, ತಂದು ತೋರಿದರೆ ಆನಂದತೀರ್ಥರು.]

೫೬ — — —
(=೧೧; ಹ. ಪ್ರ. ೪೯)

೫೭ — ೨೮ ೧೮೯
[ಹ. ಪ್ರ.=ತೀರ್ಥರೊಂದಾಗಿ]

೫೮ ೪೧ ೩೧ ೧೯೨
[ಉ.ಪ್ರ.=ಸಮಾನವಿಲ್ಲ. ನ್ಯಾ.ಪ್ರ.=ಶಾಸ್ತ್ರೋಕ್ತದಿಂದ ನಿರ್ಣಯ]
ಗಂಗೆ–ಬದರಿ–ಬ್ರಹ್ಮಸೂತ್ರ ಭಾಷ್ಯಲಕ್ಷಿತ (ಸು. ವಿ. ೬,೪೭;೯,೯).

೫೯ — — —
(ಹ. ಪ್ರ. ೫೨)

| | ಉ. ಪ್ರತಿ | ಬೆಂ. ಪ್ರತಿ | ವ್ಯೆ. ಪ್ರತಿ |
|---|---|---|---|
| ೬೦-೧] | ೭೩-೪ | — | (+ ಟಿಪ್ಪಣಿ) |

(ಹ. ಪ್ರ.೮೫-೬) [ಉ. ಪ್ರ.=ಶ್ರೀಮದಾಚಾರ್ಯರಿಗೆ] (ಸು.ವಿ. ೯, ೧೭; ರಾಜಮಹೇಂದ್ರಿಯ ಶೋಭನಭಟ್ಟರೇ ಪದ್ಮನಾಭತೀರ್ಥರು–ಸು. ವಿ. ೧೫, ೧೨೦.)

| | | | |
|---|---|---|---|
| ೬೨-೩] | ೪೨-೫೬ | — | ೧೮೩,೨೦೯ |

(ಹ. ಪ್ರ. ೫೩, ೭೩) [ಉ. ಪ್ರ.=ಕ್ಷೇತ್ರದಲ್ಲಿ ತಪಸು, ನಿರ್ಮಲ ಮಾಡಿ, ತಿಳಿಸಿ. ವ್ಯೆ. ಪ್ರ.=ಕ್ಷೇತ್ರಕ್ಕೆ ಬಂದು.] (ಸು .ವಿ. ೯. ೨೯, ೩೫.)

೭೪-೮೧] ಕೃಷ್ಣ ಪ್ರತಿಷ್ಠೆ. (ಸು. ವಿ. ೯, ೪೦-೩ರ ವ್ಯಾಖ್ಯಾನೋಕ್ತ ಸ್ಕಾಂದಪುರಾಣ ಸಹ್ಯಾದ್ರಿಖಂಡ ಹಾಗೂ ಬಾಲಲೀಲೆ ಅಂತ್ಯಾನುಸಾರ, ದೇವಕಿಗೆ ಲೀಲಾಭಂಗಿದೋರಿದ ಕೃಷ್ಣಮೂರ್ತಿ ವಿಶ್ವಕರ್ಮನಿಂದ ಆಗಿ ದ್ವಾರಕೆಯ ರುಕ್ಮಿಣೀವನಸ್ಥ ಗೋಪೀ ಸರದ ಚಂದನ ಕಿಳಿದಿತ್ತು.) ಹಡಗಿನ ಕಥೆ, ಪೂಜಾದಿ ವಿವರ ಮೂಲದಲ್ಲಿಲ್ಲ.

| | ಹ. ಪ್ರ. | ಉ. ಪ್ರ. | ಬೆಂ. ಪ್ರ. | ವ್ಯೆ. ಪ್ರ. |
|---|---|---|---|---|
| ೬೪-೫ | ೩೪-೫ | ೪೩-೪ | ೩೩-೪ | ೧೯೪-೫ |

[ಉ.ಪ್ರ.=ಪ್ರೇಮದಿಂದ ತಡಿಗೆ, ಬೇಡಿದ್ದು ಬೇಡಿ. ವ್ಯೆ.ಪ್ರ.=ಹಡಗು ಬಂದು ದಡಕೆ ಸೇರಿ, ಬೇಡ್ತಿರಿ ಬೇಡಿಕೊಳ್ಳಿ.]

| | | | | |
|---|---|---|---|---|
| ೬೬ | ೫೬ | — | ೩೫ | ೧೯೬ |

[ವ್ಯೆ. ಪ್ರ =ಮಣ್ಣಿನ ಗಡ್ಡೆ]

| | | | | |
|---|---|---|---|---|
| ೬೭ | ೫೭ | ೪೫ | — | (+ ಟಿಪ್ಪಣಿ) |

[ವ್ಯೆ. ಪ್ರ.=ಶ್ರೀಮದಾಚಾರ್ಯರು, ತೆಗೆದುಕೊಂಡರು.]

| | | | | |
|---|---|---|---|---|
| ೬೮ | — | — | ೩೬ | ೧೯೭ |

[ವ್ಯೆ. ಪ್ರ.=ಒಂದು ಗಡ್ಡೆ]

| | | | | |
|---|---|---|---|---|
| ೬೯ | ೫೮ | — | ೩೭ | ೧೯೮ |

[ನ್ಯೈ. ಪ್ರ.=ಮಧ್ಯ ಮಾರ್ಗದಲ್ಲಿ ಒಂದು ಗಡ್ಡೆ ಒಡೆದು ಒಡಭಾಂಡೇಶ್ವರಾಯಿತ್ತು] ಪಾಜಕ ದುರ್ಗಿ ಪರುಶರಾಮ ಸ್ಥಾಪಿತ (ಸು. ವಿ. ೨, ೧೧); ೨ನೆಯ ಗಡ್ಡೆಯ ಜನಾರ್ದನ ಯುರಮಾಳಸ್ಥ ?

| | ಹ. ಪ್ರ. | ಉ. ಪ್ರ. | ಬೆಂ. ಪ್ರ. | ನ್ಯೈ. ಪ್ರ. |
|---|---|---|---|---|
| ೭೦ | ೫೯ | ೪೬ | — | (+ಟಿಪ್ಪಣಿ) |

(ಉ.=೬೮) [ಉ. ಪ್ರ.=ಕರಕೊಂಡು]

| | | | | |
|---|---|---|---|---|
| ೭೧ | ೬೦ | ೪೭ | ೩೮ | ೧೯೯ |

[ಬೆಂ. ನ್ಯೈ. ಪ್ರ.=ಪ್ರತಿಷ್ಠೆ ಮಾಡಿದರು.]

| | | | | |
|---|---|---|---|---|
| ೭೨ | ೬೧ | ೪೮ | — | (+ಟಿಪ್ಪಣಿ) |
| ೭೩ | ೬೨ | — | — | — |
| ೭೪ | ೬೩ | — | ೩೯ | ೨೦೦ |

[ಬೆಂ. ಪ್ರ.=ಒಂದು, ಎರಡು]

ಹೃಷಿಕೇಶತೀರ್ಥರಿಗೆ ರಾಮ
ನರಸಿಂಹ ,, ಕೃಷ್ಣ
ಜನಾರ್ದನ ,, ,,
ಉಪೇಂದ್ರ ,, ವಿಠಲ
ವಾಮನ ,, ,,
ವಿಷ್ಣು ,, ಭೂವರಾಹ
ಶ್ರೀರಾಮ ,, ನೃಸಿಂಹ
ಅಧೋಕ್ಷಜ ,, ವಿಠಲ

| | | | | |
|---|---|---|---|---|
| ೭೫ | ೬೪ | ೪೯ (೬೬ಉ) | ೪೦ | ೨೦೧ |

[ನ್ಯೈ. ಪ್ರ.=ಶ್ರೀಕೃಷ್ಣನನ್ನೆ ಪೂಜಿಸುತಿದ್ದರು.]

| | | | | |
|---|---|---|---|---|
| ೭೬–೭ | ೬೫–೬ | — | — | — |

[ಹ.ಪ್ರ.=ವರುಷಕ್ಕೆ] (೬೬ಉ=೭೩, ೫)

| | | | | |
|---|---|---|---|---|
| ೭೮–೯ | ೬೭–೮ | ೫೦–೧[ಕೀರ್ತಿ] | ೪೧–೨ | ೨೦೨–೩ |

[ಮೈ. ಪ್ರ.=ಮಹಾಪೂಜೆಯನ್ನೆ ಮಾಡಿ] (ಮಧ್ಯತಾಳಸ್ಥ ನೃಸಿಂಹ ಪಿತಾರ್ಚಿತ, ಸುಬ್ರಹ್ಮಣ್ಯ ಕೃಷ್ಣ ಗುರ್ವರ್ಚಿತ.)

| | ಹ. ಪ್ರ. | ಉ. ಪ್ರ. | ಬೆಂ. ಪ್ರತಿ | ಮೈ. ಪ್ರ. |
|---|---|---|---|---|
| ೮೦-೧ | ೭೧-೨ | ೫೪-೫ | ೪೩(-೪) | ೨೯೪(೫)೮ |

[ಉ. ಪ್ರ.=ಅಚ್ಯುತನ ಪಟ್ಟಣಕ್ಕೆ ಕಲಶ ಗೋಪುರ. ಮೈ ಪ್ರ.= ಕಾಂತಿ ಗೋಪುರ ಪ್ರಕಾಶದ ಬೆಳಕು.]

| | | | | |
|---|---|---|---|---|
| ೮೨-೩] | ೮೯-೯೦ | ೬೭-೮ | ೫೬-೭ | ೨೨೦-೧ |

[ಹ. ಪ್ರ.=ಕೇರಳ ಭೂಮಿಯು. ಉ. ಪ್ರ.=ಕೇರಳ ಭೂಮಿಯನ್ನು. ಮೈ.ಪ್ರ.=ಕೇರಳ ದೇಶವ, ಆಗ ಗುದ್ದಲಿ ಹಿಡಿದು, ಹೋಯಿತು.] ಪುನರ್ಬದರೀಯಾತ್ರೆ (ಸು. ವಿ. ೯,೫೩-೫;೧೦,೪-೭). ೪೭ರೊಡನೆ ಕೂಡಿದ ನುಡಿಯಲ್ಲಿ 'ಕೇರಳ' ತಪ್ಪಾಗಿ ಪುನರಾವರ್ತಿತ. ಜೈನ ಈಶ್ವರದೇವ ಈ ಪಥಿಕರಿಗೂ ಕೆರೆ ಅಗೆಯಿರೆಂದ, ತೋರಿಸೆಂದು ಅಗೆಯು ಹಚ್ಚಿ ದಾಟಿದರು ಮಧ್ವರು.

| | | | | |
|---|---|---|---|---|
| ೮೪-೫] | ೯೯-೧೦೦ | ೭೧-೨ | ೫೨-೩ | ೨೧೬-೭ |

[ಉ.ಪ್ರ.=ಶ್ರೀಹರಿ. ಮೈ. ಪ್ರ.=ಭಾಷೆಕೊಟ್ಟು ಸುತ್ಯ.] (ಸು. ವಿ. ೧೦, ೮-೧೯=ಬೆನ್ನು ಹಿಡಿದ ಶಿಷ್ಯರೊಡನೆ ಗಂಗೆಯು ದಾಟಿ, ದೆಹಲಿ ದೊರೆಗೆ ಉರ್ದುವಿನಲ್ಲಿ ಉತ್ತರಿಸಿದ್ದು.)

| | | | | |
|---|---|---|---|---|
| ೮೬-೭] | ೧೦೨-೧ | ೭೦-೬೯ | ೫೫-೪ | ೨೧೯-೮ |

[ಬೆಂ. ಪ್ರ.=ನಿಂತಿರಲು. ಮೈ. ಪ್ರ.=ವಸ್ತ್ರವನ್ನು ಬಡಿದಾಡಿ, ತಿರುಗಿ.] (ಸು.ವಿ. ೧೦; ೨೦, ೨೨=ಕಳ್ಳರಿಗೆ ಕಾವಿಯು ಗಂಟೆಸೆದು ಕಚ್ಚಾಡಿಸಿ ಕೊಂದುದು, ಕಲ್ಲಾಗಿ ಕಂಡು ಪಾರಾದ್ದು.)

| | | | | |
|---|---|---|---|---|
| ೮೮] | ೯೮ | — | ೫೧ | ೨೧೫ |

[ಮೈ. ಪ್ರ.=ಜಲವು, ಹರಿಯು ಶಿಷ್ಯರ ಕರೆಯು ಕಳಿಸಿದ.] ವ್ಯಾಸ ಮುಷ್ಟಿ-ತಾತ್ಪರ್ಯನಿರ್ಣಯಾನುಜ್ಞೆ ಸಹಿತ ಮರಳಿ, ಜಲಸ್ತಂಭನ

ದಿಂದ ಗಂಗೆಯ ದಾಟಿದ್ದು ನೋಡಿ, ಕಾಶಿರಾಜ ದೂತರಿಂದ ಶಿಷ್ಯರನ್ನೂ ದಾಟಿಸಿದ (ಸು. ವಿ. ೧೦, ೨೪-೩೧).

ಹ. ಪ್ರ. ಉ. ಪ್ರ. ಬೆಂ. ಪ್ರ. ಮೈ. ಪ್ರ.

೮೯] ೭೬ ೫೯ ೪೯ ೨೧೩

(ಉ=ಭೀಮಸುಪ್ವಾಲಿ ೯) [ಉ. ಪ್ರ.=ಮುನ್ನೂರು, ನಿಗಮಸಿದ್ಧರಿಗೆ. ಮೈ. ಪ್ರ.=ಜೀರ್ಣವನ್ನೆ ಮಾಡಿದರು ವಾಯುತನಯರು.] (ಸು. ವಿ. ೧೦, ೫೨=ಗೋವೆಯ ಶಂಕರನಿತ್ತ ೩೦ ತಂಬಿಗೆ ಹಾಲು, ೪೦೦೦ ಬಾಳೆ ಹಣ್ಣು–ಇಲ್ಲಿ ಪ್ರಾಸಾರ್ಥ ೩೦೦೦–ತಿಂದರು.)

೯೦] ೮೧ ೬೪ — (+ಟಿಪ್ಪಣಿ)

[ಉ. ಪ್ರ.=ಕೇಳಲಿಕ್ಕೆ.] (ಸು. ವಿ. ೧೧, ೧=ಉಡುಪಿಯ ಬಾನಲ್ಲಿ ಬ್ರಹ್ಮಸೂತ್ರಭಾಷ್ಯ ಕೇಳಬಂದ ಶೇಷನ ಬೆಳಕು ಮಿಂಚಿತು.)

೯೧] ೯೩ — — —

(ಸು. ವಿ. ೧೨, ೮='ಮಾಯಾವಾದ ಅಭೇದ್ಯವಾದರೂ ದ್ವೈತಜ್ವಾಲೆ ದಹಿಸುತ್ತಿದೆ' ಎಂದ ಅದ್ವೈತಿ. ತಾರಕ=ಕುಮಾರಸ್ವಾಮಿ ಕೊಂದ ಅಸುರ.)

೯೨] ೯೪ — — —

(ಸು. ವಿ. ೯, ೩೯; ೧೨, ೧೪=ಸಿದ್ಧಾಂತೋಪದೇಶಕೆ ಶಂಖಚಕ್ರಾಂಕಿತ ಶಿಷ್ಯರು, ಬೆಸ್ತರಂತೆ ಜನಮನಕೆ ಬಲೆ ಬೀಸುವರು.)

೯೩] ೮೦ ೬೫ — (+ಟಿಪ್ಪಣಿ)

[ಉ. ಪ್ರ.=ಒಣಗಲಿಕ್ಕೆ] (ಸು. ವಿ. ೧೩, ೧೨=ಕೇರಳ ಕಬೆನಾಡ ಮದನೇಶ್ವರಾಲಯದಲ್ಲಿ ಪ್ರಾತರಾಹ್ನಿಕಗೈವ ಮಧ್ವರ ನಾಮ–ಮುದ್ರೆ ಒಣಗಲು, ಇನ್ನಳಿಸವೆಂದು ಶಿಷ್ಯ ತುಳಸೀ ಮಾಲೆ ಹಾಕಿದ.)

೯೪] (=೬೦) ೯೭ — — —

(ಸು. ವಿ. ೧೩, ೨೨=ಅಲ್ಲಿಂದ ಹೊರಟ ಮಧ್ವರತ್ತ ಬಂದೆರಗಿದ ಜಯಸಿಂಹ=ರಾಜಸಿಂಹ.)

ಹ. ಪ್ರ. ಉ. ಪ್ರ. ಬೆಂ. ಪ್ರ. ಮೈ. ಪ್ರ.

೯೫] (=೬೦,೯೪) — — ೨೭ ೧೮೮
[ಮೈ. ಪ್ರ.=ಶ್ರೀಮಧ್ವಾಚಾರ್ಯರಿಗೆ ತ್ರಿವಿಕ್ರಮಪಂಡಿತಾಚಾರ್ಯರು.]
(ಮುಂದೆ ವಿಷ್ಣುಮಂಗಳಾಲಯದಲ್ಲಿ ಬಂದೆರಗಿದರು ತ್ರಿವಿಕ್ರಮ ಪಂಡಿತರು=ಸು. ವಿ- ೧೩,೬೯ )

೯೬–೭] ೮೭,೯೬ ೭೫,-[ಪುಸ್ತಕವ] — (+ಟಿಪ್ಪಣಿ)
(ಸು. ವಿ. ೧೨, ೪೨; ೧೩, ೧; ೧೪, ೨=ಅವರನುಜ ಶಂಕರಾಚಾರ್ಯರಲ್ಲಿರಿಸಿದ್ದ ಗ್ರಂಥಗಳನ್ನಪಹರಿಸಿ ಭಂಗಿತನಾದ ಪದ್ಮತೀರ್ಥ ಕೊಡಿಪಾಡಿಯಲ್ಲಿಟ್ಟು ಹೋದರೂ, ಜನಾರ್ದನಾಲಯದಲ್ಲಿ ಚಾತುರ್ಮಾಸ್ಯ ಕಳೆತ ಆಚಾರ್ಯರು ಅವನ್ನು ಮಧ್ಯಸ್ಥರಲ್ಲಿರಿಸಿ, ರಾಜಾಹೂತರಾಗಿ, ಮದನೇಶ್ವರ-ವಿಷ್ಣುಮಂಗಳಾಲಯಕ್ಕೈತಂದು, ಎಲ್ಲರೆದುರು ಕ್ಷಮಿಸಿ ಸ್ವೀಕರಿಸಿದರು.)

೯೮–೯] ೭೭-೮ ೬೦-೬೦ -೪೮ ೨೦೨(+ಟಿ.)
[ಮೈ. ಪ್ರ.=ಸ್ನಾನವನ್ನೆ ಮಾಡುವಾಗ, ಹೋಗಿ ನಿಲ್ಲಿಸಿದ ಗಂಗೆ.]
(ಪ್ರಾತಃಸ್ನಾನಾದಿಗಳಿಗೆ ಶಿಷ್ಯರ ಸೇವೆ ಸಲ್ಲುತಿತ್ತು. ಪಾಠಮಾಡಿ ಮಧ್ಯಾಹ್ನ ಮೀಯ ಹೋದ ಕೆರೆಗೆ ಗಂಗೆ ಬಂದುಪವಿತ್ರಳಾದಳು =ಸು. ವಿ. ೧೪; ೯-೧೧,೨೬.)

೧೦೦] ೭೯ ೬೨ — (+ಟಿಪ್ಪಣಿ)
(ಸು. ವಿ. ೧೪; ೩೦=ಆ ಸರಸ್ತೀರಸ್ಥ ಮಧ್ವರು ೧೨ ನಾಮ ಹಚ್ಚಿಕೊಂಡು ಹೊಳೆದರು.)

೧೦೧–೨] ೬೯-೭೦ ೫೨-೩ ೪೫-೬ ೨೦೬-೭
[ಉ. ಪ್ರ.=ತೀರ್ಥವನ್ನೆ. ಮೈ. ಪ್ರ.=ಲಿದ್ದ ಬಾಲಕರೆಲ್ಲ ಒತ್ತಿ ಕಾಲು ವೆಯ ಕಟ್ಟಿ.] (ಸು. ವಿ. ೧೫, ೪೦=ಕೊಡೆಲ್ ಗುಡಿಯಲ್ಲಿ ಚಾತುರ್ಮಾಸ್ಯವಾಗಿ, ಮನೆಯಲ್ಲಿ ತಮ್ಮನಿಗೆ ದೀಕ್ಷೆಯಿತ್ತು, ಮತ್ತೆ ಚಾತು

ರಾಮ್ಯಸ್ಯಕ್ಕೆ ಕಣ್ವತೀರ್ಥ ಏಕವಾಟೆ. ಶಾಂತ್ಯ-ಮಠದಲ್ಲಿರುತ್ತ ದಂಡ ತಿರುಗಿಸಿ ತೀರ್ಥ-ಕಾಲುವೆ ನಿರ್ಮಿಸಿ ಬತ್ತ ಬೆಳೆಸಿದರು.)

| | ಹ. ಪ್ರ. | ಉ. ಪ್ರ. | ಬೆಂ. ಪ್ರ. | ನ್ಯೈ. ಪ್ರ. |
|---|---|---|---|---|
| ೧೦೩] | ೮೦ | ೬೫ | ೪೭ | ೨೧೧ |

[ಉ. ಪ್ರ.=ಉಂಗುಷ್ಠದಿಂದಲೆ. ನ್ಯೈ. ಪ್ರ.=ಶಾಂತವಾಗಿರಲು ಜ್ಯೋತಿ ನಿರ್ಮಾಣ.] (ಸು. ವಿ. ೧೬, ೬=ಸಾತ ನಡೆದಾಗ ದೀಪ ನಂದಲು, ಕಾಲ್ಬೆರಳ ನಖಕಾಂತಿಯಲ್ಲೆ ಓದಿಸಿದ್ದು.)

| | | | | |
|---|---|---|---|---|
| ೧೦೪] | ೮೩ | — | ೫೯ | ೨೨೩ |

[ನ್ಯೈ. ಪ್ರ.=ಗಂಡು ಆಟೆ ಎಂಬುವನ ಗದೆಯಿಂದ ಸೀಳಿದರೆ, ಧರಣಿ, ಬಿದ್ದಿತು.] ಪೂರ್ವವಾಟೆ-ಗಂಡವಾಟೆ (ಮೂಡೆಂಬಾಡಿ-ಕೊಡಿಂಬಾಡಿ) ಸೋದರರು ಕಂತ ಒತ್ತಿ ದಣಿದುರುಳಿದ್ದು (ಸು. ವಿ. ೧೬, ೨೫-೯).

| | | | | |
|---|---|---|---|---|
| ೧೦೫] | ೧೦೩ | ೭೬ | ೬೨ | ೨೨೬ |

[ನ್ಯೈ. ಪ್ರ.=ಮಾತ್ರದಿಂದಲೆ ತ್ರೀಣು ಮಾತ್ರ ಮಾಡಿ ಹಾರಿಸಿ.] (ಸು. ವಿ. ೧೬, ೩೦=ಹುಡುಗನ ಹೆಗಲೇರಿ ನೃಸಿಂಹಾಲಯ ಸುತ್ತಿ ಅಣಿಮಾ ಲಘಿಮಾ-ಮಹಿಮಾದ್ಯಷ್ಟಸಿದ್ಧಿ ತೋರಿದ್ದು).

| | | | | |
|---|---|---|---|---|
| ೧೦೬] | ೮೪ | — | — | — |

(ಸು. ವಿ. ೧೬, ೩೦-೪=ಪೂರ್ವವಾಟೆನಂಥ ಜಟ್ಟಿಗಳು ಬೆರಳಿತ್ತಿ, ಕುರುಳಿಳಿದು, ಮೂಗು ಗುದ್ದಿ ಬಿದ್ದುದು.)

| | | | | |
|---|---|---|---|---|
| ೧೦೭] | ೯೫ | — | ೬೦ | ೨೨೪ |

[ನ್ಯೈ. ಪ್ರ =ಕೊಕ್ಕಟಾ ದೇಶದೊಳಗೆ ಮುಪ್ಪಿನ ಬ್ರಾಹ್ಮಣರಲು ಕೃಷ್ಣಮೂರ್ತಿ ಮಹಿರ್ಣವನ್ನು ಮಾಡಿಸಿದರು.] (ಸು. ವಿ. ೧೬, ೪೦= ಧನ್ವಂತರಿ ದೇಗುಲದ ಕೊಕ್ಕಡಕ್ಕೈದಿ ಇಡೆ ಪಾಡಿತ್ತಾಯ ಭಕ್ತನಿಗೆ ಪುರಾಣ ಸೂಕ್ತಿಗಳ 'ಕೃಷ್ಣಾಮೃತ ಮಹಾರ್ಣವ' ಹೇಳಿದ್ದು.)

ಹ. ಪ್ರ    ಉ. ಪ್ರ.    ಬೆಂ ಪ್ರ    ಮೈ ಪ್ರ.

೧೦೮-೯]    —    —    ೬೩-೪    ೨೨೭-೮

(೬೦, ೯೪-೫, ೧೦೯ರ ಅಂತ್ಯ ಒಂದೇ ! (ಸು. ವಿ ೧೬, ೫೪-೮=ಕ್ರಿ.ಶ ೧೩೧೭ ರ ಮಾಘ ಶುದ್ಧ ಅಷ್ಟಮೀ ವರೆಗಿದ್ದ ಮಧ್ವರು, ನವಮೀ ಅನಂತೇಶ್ವರಾಲಯದಲ್ಲಿ ಐತರೇಯೋಪನಿಷದ್ಭಾಷ್ಯ ಹೇಳುತ್ತ, ಹೂಮಳೆಯಲ್ಲಿ ಅದೃಶ್ಯರಾಗಿ ಬದರಿಗೈದಿದರು )

೧೧೦]    ೧೦೪    ೭೭    ೬೫    ೨೨೯

[ಉ. ಪ್ರ.=ಮಹಿಮೆ, ಮುಕ್ತಿ.] (ಉ=ಬಾಲಲೀಲೆ ಪ್ರೂ ೯೦೭-೮, ಉ. ೫೧೧ ) ಸಾಯುಜ್ಯ ಮುಕ್ತಿ ಇತರ ಕೃತಿಗಳಲ್ಲೂ ವಿಶೇಷತಃ ಉಕ್ತ; ಅಂಕಿತ 'ಹಯವದನ'

೧೧೧]    ೧೦೫    —    —    —

[ಹ. ಪ್ರ.=ವಾದಿರಾಜರು ] ಸೋದೆಯ ಉಲ್ಲೇಖ; ಕೃತಿ ಸೋದಾವಾಸದಲ್ಲಾಗಿರಬೇಕು (೧೫೮೨-೧೬೦೦)

ಈ ಟಿಪ್ಪಣಿಗಳಿಂದ ಮೈಸೂರು ಪ್ರತಿ ಬೆಂಗಳೂರು-ಉಡುಪಿ ಪ್ರತಿಗಳನ್ನಾಧರಿಸಿರುವುದೂ ಹಸ್ತಪ್ರತಿ ತುಸು ಭಿನ್ನವಾಗಿರುವುದೂ ಸ್ಪಷ್ಟ. ಆದರೆ ಎಲ್ಲ ಪ್ರತಿಗಳಲ್ಲಿ ಹಿಂದು ಮುಂದಾದ ನುಡಿಗಳನ್ನು ಮೂಲಾನುಸಾರ ಹೊಂದಿಸಿದಲ್ಲಿ ಕೃತಿ ಶುದ್ಧವೆನಿಸಿ ಅರ್ಥವತ್ತಾಗುವುದಿಲ್ಲವೆ ? ಈ ಉಚಿತ ಪಾಠಾಂತರಗಳನಿಟ್ಟುಕೊಂಡುದೂ ಇದಕ್ಕೆ ಕಾರಣ



# ಪರಿಶಿಷ್ಟಗಳು –

## (೧) ನುಡಿಗಳ ತೌಲನಿಕ ಮೊತ್ತ

| | ಉ. ಪ್ರ. | ಬೆಂ. ಪ್ರತಿ | ಮೈ ಪ್ರ | ಹ. ಪ್ರ | ಪ್ರಸ್ತುತ ಪ್ರ |
|---|---|---|---|---|---|
| ೧) | ೭೪ | ೮೧ | ೭೨ | ೮೫ | ೮೫ |
| ೨) | ೩೩ | ೮೬ | ೮೩ | ೧೧೩ | ೧೩೬ |
| ೩) | ೭೭ | ೬೫ | ೭೩ | ೧೦೫ | ೧೨೧ |
| ಒಟ್ಟು | ೧೮೪ | ೨೩೨ | ೨೨೮ | ೩೦೩ | ೩೩೨ |

## (೨) ಮುಖ್ಯ ಸಂಕ್ಷೇಪಣ

ಮು ಪ್ರ = ಮುದ್ರಿತ ಪ್ರತಿ

ಉ ಪ್ರ. = ಉಡುಪಿ ಪ್ರತಿ=೧-ಪಾವಂಜೆ ಗುರುರಾವ್ ಪ್ರಕಟಿತ, ಮಧ್ವಸಿದ್ಧಾಂತ ಗ್ರಂಥಾಲಯ, '೭೩ ೨-ಪ್ರಬೋಧಿನಿ ಪುಸ್ತಕ ಭಂಡಾರ ಪ್ರಕಟಿತ

ಬೆಂ ಪ್ರ = ಬೆಂಗಳೂರು ಪ್ರತಿ=ಲ ಭೀ ಮುರಗೋಡರ ವ್ಯಾಕ್ಯಾನಾಶ್ರುಪು ಪುಸ್ತಕ ಭಂಡಾರ, '೮೨

ಮ್ಯೆ. ಪ್ರ = ಮೈಸೂರು ಪ್ರತಿ=ವಾದಿರಾಜರ ದೀರ್ಘಕೃತಿಗಳು (ಕನ್ನಡ ಅಧ್ಯಯನ ಸಂಸ್ಥೆ, ಮೈ ವಿ ವಿ.)'೮೭

ಹ. ಪ್ರ. = ಹಸ್ತಪ್ರತಿ=ಹನುಮಂತ ಗುರುರಾವ ಕುಬೇರ ( ಬಾಲಿ ಹೊಸೂರ, ಶಿರಹಟ್ಟಿ, ಧಾರವಾಡ ) ಮನೆತನದ್ದು

ಸು ವಿ. = ಸುಮಧ್ವ ವಿಜಯ (ನಾರಾಯಣ ಪಂಡಿತಾಚಾರ್ಯ).

ಸಂ. ಪ. = ಸಂಪ್ರದಾಯ ಪದ್ಧತಿ (ಹೃಷಿಕೇಶತೀರ್ಥ)

ಬಾ ಲೀ = ಶ್ರೀಕೃಷ್ಣ ಬಾಲಲೀಲೆ (ವಾದಿರಾಜತೀರ್ಥ)

೧-ಪಾವಂಜೆ, ಮಧ್ವಸಿದ್ಧಾಂತ ಗ್ರಂಥಾಲಯಂ, ಉಡುಪಿ '೩೦.

೨-ಮುರಗೋಡ, ಬೆಂಗಳೂರು ೫೦, '೮೬.

೩-ಲೋಕೂರ, ಮುಂಚಿನಬಳ್ಳಿ, ಹುಬ್ಬಳ್ಳಿ, '೮೬.

ಕ. ತಾ ನಿ. = ಕನ್ನಡ ಮಹಾಭಾರತ ತಾತ್ಪರ್ಯ ನಿರ್ಣಯಂ (ವಾದಿರಾಜರು)

ತ್ರೈಲೋಕ್ಯಾಚಾರ್ಯ ಸೇವಕ ವೃಂದ, ಬೆಂಗಳೂರು, '೮೨

ಪೂ = ಪೂರ್ವಾರ್ಧ ಉ. = ಉತ್ತರಾರ್ಧ ನೋ = ನೋಡಿ

ಹೋ = ಹೋಲಿಸಿ ಟಿ = ಟಿಪ್ಪಣಿ ಇತ್ಯಾದಿ

# ಒಪ್ಪೋಲೆ

| ಪುಟ | ನುಡಿ(ಸಾಲು) | ತಪ್ಪು | ಒಪ್ಪು |
|---|---|---|---|
| ೩ | ೨೮ (೧) | ಜಾಮಂರವ | ಚಾಮರವ |
| ೫ | ೩೧ ,, | ಮೆಲ್ಲನೆನಲು | ಮೆಲ್ಲನಲು |
| | ೩೪ (೨) | ದಕ್ಷವೃಕ್ಷಗಳೆಲ್ಲ | ದಕ್ಷ ವೃಕ್ಷಗಳೆಲ್ಲ |
| ೬ | ೬೪ (೧) | ನೀತಿಯಲ್ಲ | ನೀತಿಯಂಲ್ಲ |
| ೯ | ೭೮ ,, | ತೈಲಚ್ವಾಲದಿಂದ | ತೈಲಜ್ವಾಲದಿಂದ |
| ೧೦ | ೧೪ , | ಆಕ್ಷಣ | ಆ ಕ್ಷಣ |
| | ೧೬ ,, | ಬಾಧೆತಾಳದೆ | ಬಾಧೆ ತಾಳದೆ |
| | (ಅಂತ್ಯಸಾಲು) | ಪಾಂಜಾಲ. ೧೨ | ಪಾಂಚಾಲ ೧೯ |
| ೧೩ | ೪೭ (೨) | ೪೨ | ೪೭ |
| | ೪೯–೫೦ (೧) | ಧೃಷ್ಟದ್ಯುಮ್ನನು | ಧೃಷ್ಟದ್ಯುಮ್ನನಂ |
| ೧೪ | ೫೭ (೧) | ಒಡಗೂಂಡು | ಒಡಗೊಂಡಂ |
| ೧೬ | ೮೧–೨ (೨) | ಕಟ್ಟಿತ್ತಿದ್ದನು | ಕಟ್ಟುತ್ತಿದ್ದನು |
| | ೮೫ (೧) | ವು ಹಿಂಡನೆ | ಆವು ಹಿಂಡನೆ |
| ೧೭ | ೯೮ (೧) | ವಧೆಮಾಡಿ | ವಧೆ ಮಾಡಿ |
| ೨೦ | ೧೨೮ (೨) | ರಾಜ್ಯಭೂಮಿ | ರಾಜ್ಯ ಭೂಮಿ |
| | ೧೨೯ (೧) | ಸೌರವಮೂನದಿಂದ | ಸೌರವಮಾನದಿಂದ |
| | (೨) | ಹೆಳಿದನು | ಹೇಳಿದನು |
| | ೨೩೦ (೧) | ಜಾಂದ್ರಮಾನದಿಂದ | ಚಾಂದ್ರಮಾನದಿಂದ |
| | ೧೩೭ ,, | ವೈರಿ ಸಂಹರ | ವೈರಿ ಸಂಹಾರ |
| ೨೬ | ೪೫ ,, | ಶ್ರೀ | ಶ್ರೀ— |
| | ೪೯ (೨) | ಭಂಗಪಡಿಸಿ | ಭಂಗ ಪಡಿಸಿ |
| | ೫೦ ,, | ಮಾಡಿಕೊಟ್ಟರು | ಮಾಡಿ ಕೊಟ್ಟರು |
| ೨೭ | ೬೧ ,, | ಪಾದತೊಳೆದು | ಪಾದ ತೊಳೆದು |
| | ೬೭ ,, | ಗೊಪೀ ಚಂದನದ | ಗೋಪೀ ಚಂದನದ |

| ಪುಟ | ನುಡಿ(ಸಾಲು) | ತಪ್ಪು | ಒಪ್ಪು |
|---|---|---|---|
| ೨೮ | ೭೯ (೧) | ಮಾಧ್ಯತಾಳ | ಮಧ್ಯತಾಳ |
| ೨೯ | ೯೦ (೧) | ಶ್ರೀಮದಾಜಾರ್ಯರ | ಶ್ರೀಮದಾಚಾರ್ಯರ |
| ೩೨ | ಪಲ್ಲವಿ (೩) | ಪುನರಾದರ್ತಿತ | ಪುನರಾವರ್ತಿತ |
| | (೭) | ಭೀವಂತ | ಭೀಮ |
| | ೩] (೧) | ಮಾದಿರಾಜೀಯಿ | ವಾದಿರಾಜೀಯ |
| ೩೪ | ೩೭] (೧) | ಶಿರವ | [ಶಿರವ |
| ೩೬ | ೧೫ (೧) | ೧೫ ೮ ಚರಿಸುತಿರಲು | ೧೫-೮ ಚರಿಸುತಿರಲು= |
| ೩೭ | ೩೩-೭ (೪-೫) | ಮು | ಮು ಪ್ರ |
| ೩೯ | ೯೦-೭ (೨) | ೫೦ | ೫೦, |
| | ೧೦-೧೧೫ (೧) | ೧೦ | ೧೧೫ |
| ೪೨ | ೧೫ (೩) | ಒದರುತಿದೆ | ಒದರುತಿರೆ |
| ೪೩ | ೧೯] (೬) | ಆಡುತಿರಲುಹುಣಿಸೆಪಕ್ಕ | ಆಡುತಿರಲು ಹುಣಿಸೆಪಕ್ಕ |
| ೪೬ | ೪೨ (೫) | ಆನಂದಪದ | ಆನಂದಪ್ರದ |
| | ೪೮ (೪) | ಬಾಳಿಗೊಸೆ | ಬಾಳಿಗೊನೆ |
| ೪೮ | ೬೪-೮೧] (೩) | ವಿಶ್ಕಕರ್ಮ | ವಿಶ್ವಕರ್ಮ |
| ೪೯ | (೧) | ಗಡ್ಢೆ | ಗಡ್ಡೆ |
| | (೨) | ಪಾಜಕ ದುರ್ಗ ಪರುಶುರಾಮ | ಪಾಜಕದುರ್ಗ ಪರಶುರಾಮ |
| | (೫) | ಟಿಪ್ವಣಿ | ಟಿಪ್ಪಣಿ |
| ೫೦ | (೧) | ಮಹಾವೂಜೆಯನ್ನ | ಮಹಾಪೂಜೆಯನ್ನ |
| ೫೩ | (೧) | ಏಕವಾಟಿ. ತಾಂತ್ಯ-ಮರದಲ್ಲಿರುತ್ತ | ಏಕವಾಟಿ-ತಾಂತ್ಯಮರದಲ್ಲಿರುತ್ತ |
| | ೧೦೫ (೩) | ನೃಹಿಂಹಾಲಯ | ನೃಸಿಂಹಾಲಯ |
| | ೧೦೬ (೨) | ಬೆರೆಳೆತ್ತಿ | ಬೆರಳೆತ್ತಿ |
| ೫೫ | (೧೪) | ವ್ಯಾಕಸಾಶ್ರಮ | ವ್ಯಾಸಾಶ್ರಮ |

---



ವಾದಿರಾಜರು ತಾಯಿಗೆ ಮಾಡಿಸಿಕೊಟ್ಟ ಕಂಚಿನ ಸ್ವವಿಗ್ರಹ

(ಇಸ್ವಿ ೧೪೯೨)